ಪುಸ್ತಕ ಭಂಡಾರ ಮಾಲೆ ೬.

# ಮಕ್ಕಳ ವರ್ತನೆ

ಡಾ॥ ಬಿ. ಕುಪ್ಪುಸ್ವಾಮಿ, ಎಂ. ಎ., ಡಿ. ಲಿಟ್

ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ
ಮೈಸೂರು

# ಪೀಠಿಕೆ

ಐದು ವರ್ಷಗಳ ಹಿಂದೆ ವಯಸ್ಕರ ಶಿಕ್ಷಣ ಮಾಲೆಯಲ್ಲಿ ಮಕ್ಕಳನ್ನು ಕುರಿತು ಎರಡು ಪುಟ್ಟ ಪುಸ್ತಕಗಳನ್ನು ಬರೆದೆ. 'ನಮ್ಮ ಮಕ್ಕಳು' ಮತ್ತು 'ಮಕ್ಕಳ ಬೆಳವಣಿಗೆ' ಎಂಬ ಈ ಎರಡು ಪುಸ್ತಕಗಳಲ್ಲಿ ಮಕ್ಕಳ ಪೋಷಣೆಯನ್ನು ಕುರಿತು ಕೆಲವು ಸಲಹೆಗಳನ್ನು ಸೂಚಿಸಿದೆ. ಇದನ್ನು ಓದಿ ನನ್ನ ಮಿತ್ರರಾದ ಶ್ರೀ ನ. ಭದ್ರಯ್ಯನವರು ಈ ವಿಷಯವನ್ನು ಕುರಿತು ಹೆಚ್ಚು ವಿವರಗಳನ್ನುಳ್ಳ ಒಂದು ಪುಸ್ತಕವನ್ನು ಬರೆಯಬೇಕೆಂದು ಸಲಹೆ ಮಾಡಿದರು. ಈ ಪುಸ್ತಕ ಅದರ ಫಲ.

ಒಂದು ದೇಶದ ಏಳಿಗೆ ಮತ್ತು ಮುನ್ನಡೆ ಆಗಬೇಕಾದರೆ ನಾನಾವಿಧವಾದ ಕಾರ್ಯಗಳನ್ನು ಕೈಗೊಳ್ಳಬೇಕು. ಮುಖ್ಯವಾಗಿ ವಸ್ತು ಮತ್ತು ವ್ಯಕ್ತಿಯ ಜ್ಞಾನಭಂಡಾರವನ್ನು ಹೆಚ್ಚಿಸಬೇಕು. ಈ ಕಾರ್ಯಕ್ರಮಗಳಲ್ಲಿ ಮುಖ್ಯವಾದ ಒಂದು ಅಂಶ ಮಕ್ಕಳ ಪೋಷಣೆಗೆ ಸೇರಿದೆ. ಮಕ್ಕಳು ಒಂದು ದೇಶದ ಸಂಪತ್ತು. ಅವರ ಪೋಷಣೆ, ಅವರ ವ್ಯಕ್ತಿತ್ವವನ್ನು ನಿರ್ಣಯಿಸುವುದು. ಒಂದು ವ್ಯಕ್ತಿಯ ಜೀವನದಲ್ಲಿ ಮೊದಲು ಐದು ವರ್ಷಗಳು ಬೆಳವಣಿಗೆಗೆ ಮತ್ತು ಪೋಷಣೆಗೆ ಬಹು ಮುಖ್ಯವಾದುದೆಂದು ಮನಶ್ಶಾಸ್ತ್ರ ತೋರಿಸಿಕೊಟ್ಟಿದೆ. ಶೈಶವಾವಸ್ಥೆಯು ವ್ಯಕ್ತಿತ್ವಕ್ಕೆ ಅಡಿಗಲ್ಲು. ಆದುದರಿಂದ ಮಕ್ಕಳ ಬೆಳವಣಿಗೆ ಮತ್ತು ಪೋಷಣೆಯ ವಿಷಯವನ್ನು ಕುರಿತು ತಾಯಿ ತಂದೆಗಳಿಗೆ ತಿಳಿವಳಿಕೆ ಇದ್ದರೆ ಮಕ್ಕಳ ಬೆಳವಣಿಗೆ ಸರಿಯಾಗಿ ಮುಂದುವರೆಯುವುದು. ಈ ಪುಸ್ತಕವನ್ನು ಚೆನ್ನಾಗಿ ಓದಿ, ಮನನ ಮಾಡಿ, ಮಕ್ಕಳನ್ನು ಉತ್ತಮ ರೀತಿಯಿಂದ ಪೋಷಣೆ ಮಾಡಿದರೆ ನನ್ನ ಪ್ರಯತ್ನ ಸಾರ್ಥಕವಾಗುವುದು.

ಈ ಗ್ರಂಥವನ್ನು ಬರೆಯಲು ಶ್ರೀ ಕೆ. ವಿ. ಶ್ರೀಕಂಠಯ್ಯನವರು ನನಗೆ ಅತ್ಯಂತ ಸಹಾಯ ಮಾಡಿದರು. ಅವರಿಗೆ ನಾನು ಚಿರಋಣಿ.

೬-೫-೫೦ ಬಿ. ಕುಪ್ಪುಸ್ವಾಮಿ

# ವಿ ಷ ಯ ಸೂ ಚಿ ಕೆ



## ಭಾಗ—೧.



## ಭಾಗ—೨.

### ಮಕ್ಕಳ ವರ್ತನೆಯಲ್ಲಿ ಕೆಲವು ಸಮಸ್ಯೆಗಳು

# ಮಕ್ಕಳ ವರ್ತನೆ.

## ಅಧ್ಯಾಯ ೧

### ಪ್ರವೇಶ

ನಮ್ಮ ದೇಶದಲ್ಲಿ ಮಕ್ಕಳ ಪೋಷಣೆಯು ತಾಯಿಯ ಒಂದು ಸಹಜ ಗುಣದಮೇಲೆ ನಿಂತಿದೆ ಎಂಬ ನಂಬಿಕೆಯು ಪ್ರಬಲವಾಗಿರುವುದು. ಹಳ್ಳಿಗಳಲ್ಲಿಯೇ ಏಕೆ, ಪಟ್ಟಣಗಳಲ್ಲಿಯೂ ಸಹ ಮಕ್ಕಳನ್ನು ಬೆಳೆಸಲು ಒಂದು ಪ್ರತ್ಯೇಕ ಜ್ಞಾನವು ಆವಶ್ಯಕವೆಂಬ ತಿಳಿವಳಿಕೆಯು ಇನ್ನೂ ಬೇರೂರಿಲ್ಲ. ಹೆರಿಗೆಯ ಆಸ್ಪತ್ರೆಗಳಲ್ಲಿ ಡಾಕ್ಟರುಗಳೂ ನರ್ಸುಗಳೂ ಮಗು ಹುಟ್ಟಿದ ಕ್ಷಣದಿಂದ ಹತ್ತನೆಯ ದಿನದವರೆಗೂ ಮಕ್ಕಳನ್ನು ಕ್ರಮಬದ್ಧವಾಗಿ ನೋಡಿಕೊಳ್ಳಬೇಕೆಂದು ಹೇಳಿಕೊಡುತ್ತಿರುವರು. ಮಗುವಿಗೆ ಹಾಲನ್ನು ಅದು ಅತ್ತಾಗಲೆಲ್ಲಾ ಕೊಡದೆ, ಒಂದು ಕ್ರಮದಿಂದ ಗಡಿಯಾರವನ್ನು ನೋಡಿಕೊಂಡು ಕೊಡಬೇಕೆಂದು ತಾಯಿಗೆ ಹೇಳಿಕೊಡುವರು. ಹುಟ್ಟಿದ ಕ್ಷಣದಿಂದಲೇ ಮಗುವನ್ನು ತಾಯಿಯ ಪಕ್ಕದಿಂದ ತೆಗೆದು ಪ್ರತ್ಯೇಕವಾದ ಒಂದು ಪುಟ್ಟ ಮಂಚದಲ್ಲಿಯೋ ಅಥವಾ ಪ್ರತ್ಯೇಕ ಕೊಠಡಿಯಲ್ಲಿಯೋ ಇಡುವರು. ಹೀಗೆ ಮಗುವನ್ನು ಬೇರೆ ಇಡುವುದರಿಂದ ತಾಯಿಗೂ ವಿಶ್ರಾಂತಿ, ಮಗುವಿಗೂ ವಿಶ್ರಾಂತಿ. ಹಳೆಯಕಾಲದ 'ಕತ್ತಲುಕೋಣೆ'ಯ ಕ್ರಮವನ್ನು ಬಿಟ್ಟು ಹುಟ್ಟಿದ ಕ್ಷಣದಿಂದಲೂ ಮಗುವಿಗೆ ಒಳ್ಳೆಯಗಾಳಿ ಬೆಳಕುಗಳು ಅತ್ಯಾವಶ್ಯಕವೆಂದು ತೋರಿಸಿಕೊಡುವರು. ಗಾಳಿ ಬೆಳಕುಗಳಿಂದ ಮಗುವಿಗೆ ಒಳ್ಳೆಯದಾಗುವುದೇ ಹೊರತು ಹಾನಿಯುಂಟಾಗುವುದಿಲ್ಲ ಎಂದು ತೋರಿಸಿಕೊಡುವರು. ಹೀಗೆ

ಹೆರಿಗೆಯ ಆಸ್ಪತ್ರೆಗಳಲ್ಲಿ ಮಕ್ಕಳ ಪೋಷಣೆಯನ್ನು ಕುರಿತು ತಾಯಂದಿರಿಗೆ ಎಷ್ಟೊಂದು ಹೊಸ ಜ್ಞಾನವೂ, ಹೊಸ ದೃಷ್ಟಿಯೂ ಲಭಿಸುವುದು! ಇದು ಸಾಲದೆಂದು ವಿದ್ಯಾ ಇಲಾಖೆಯವರು ಮಾಧ್ಯಮಿಕ ಶಾಲೆಗಳಲ್ಲಿ 'ಗೃಹಕಾರ್ಯ ಮತ್ತು ಶಿಶು ಪೋಷಣ' ಗಳ ಮೇಲೆ ಬರೆದಿರುವ ಪುಸ್ತಕಗಳನ್ನು ಹೆಣ್ಣುಮಕ್ಕಳಿಂದ ಓದಿಸಿ ಅವರಿಗೆ ಶಾಲೆಗಳಲ್ಲಿಯೂ ಈ ಹೊಸ ಜ್ಞಾನವು ಲಭಿಸುವಂತೆ ಮಾಡಿರುವರು. ಡಾ|| ರತ್ನಮ್ಮ ಐಸಾಕ್ ಅವರು ಈ ವಿಷಯಗಳನ್ನು ಕುರಿತು "ಹೆರಿಗೆ ಮತ್ತು ಶಿಶು ಪೋಷಣೆ" ಯಲ್ಲಿ ತಮ್ಮ ಅಮೋಘವಾದ ಸಲಹೆಗಳನ್ನು ಕೊಟ್ಟಿರುವರು. *

ಈಚೀಚೆಗೆ ಮಗುವಿಗೆ ಹೊತ್ತಿಗೆ ಸರಿಯಾಗಿ ಹಾಲುಕೊಟ್ಟು ಅದಕ್ಕೆ ಬೇಕಾದಷ್ಟು ಗಾಳಿ ಬೆಳಕುಗಳನ್ನು ಒದಗಿಸಿ ಸಡಿಲವಾದ ಉಡುಪುಗಳನ್ನು ಹಾಕಿ ಅದು ಕೈಕಾಲುಗಳನ್ನು ಸ್ವೇಚ್ಛೆಯಾಗಿ, ನಿರಾತಂಕವಾಗಿ ಆಡಿಸುವಂತೆ ಅವಕಾಶವನ್ನು ಕಲ್ಪಿಸಿಕೊಟ್ಟು ಪೋಷಣೆ ಮಾಡುವುದರಿಂದ ನಮ್ಮ ದೇಶದಲ್ಲಿ ಆಗುತ್ತಿದ್ದ ಅಪಾರ ವಾದ ಸಣ್ಣ ಮಕ್ಕಳ ಸಾವಿನ ಪ್ರಮಾಣವು ಈಗ ಕ್ರಮವಾಗಿ ಇಳಿದು ಬರುತ್ತಿದೆ. ವಿಜ್ಞಾನವು ನಮಗೆ ಎಷ್ಟರಮಟ್ಟಿಗೆ ಸಹಕಾರಿಯಾಗ ಬಹುದೆಂಬುದಕ್ಕೆ ಇದು ಒಂದು ನಿದರ್ಶನ. ವೈಜ್ಞಾನಿಕ ಮಾರ್ಗ ವನ್ನು ಅನುಸರಿಸಿ ಹುಟ್ಟಿದ ಕ್ಷಣದಿಂದಲೂ ಮಕ್ಕಳ ಪೋಷಣೆಯನ್ನು ಸರಿಯಾದ ರೀತಿಯಲ್ಲಿ ಮಾಡಿದರೆ ಎಳೆಮಕ್ಕಳ ಸಾವಿನ ಸಂಖ್ಯೆಯು ಖಂಡಿತವಾಗಿ ಕಡಮೆಯಾಗುವುದು. ಪುಟ್ಟಮಕ್ಕಳ ಸಾವು ಅದೃಷ್ಟ ಕಾರಣಗಳಿಂದಲ್ಲ ಆಗುವುದು; ಅದಕ್ಕೆ ದೃಷ್ಟವೂ, ನಿರ್ದಿಷ್ಟವೂ ಆದ ಕಾರಣಗಳಿವೆ. ಈ ಕಾರಣಗಳನ್ನು ಪರಿಹರಿಸಿದರೆ ಸಾವಿನ ಪ್ರಮಾ

* ಮೈಸೂರು ವಿಶ್ವವಿದ್ಯಾನಿಲಯದಿಂದ ಈ ಗ್ರಂಥವು ಪ್ರಕಟವಾಗಿದೆ.

ಣವು ಕಡಮೆಯಾಗುವುದು. ಹಳೆ ಸಂಪ್ರದಾಯಗಳನ್ನೂ, ಕುರುಡು ನಂಬಿಕೆಗಳನ್ನೂ ಬಿಟ್ಟು ಜ್ಞಾನಪೂರಿತವಾದ ಮಾರ್ಗಗಳನ್ನು ಅವಲಂಬಿಸಿ, ಮಕ್ಕಳ ಪೋಷಣೆಯನ್ನು ಮಾಡುವುದರಿಂದ ಮಕ್ಕಳು ಜೀವಂತರಾಗಿ ಉಳಿಯುವರೇ ಅಲ್ಲದೆ, ಆರೋಗ್ಯವಂತರೂ ದೃಢಕಾಯರೂ ಆಗಿ, ಸುಖಿಗಳಾಗಿ ಬೆಳೆಯುವರು.

ಮಕ್ಕಳ ದೈಹಿಕ ಪೋಷಣೆಯೊಂದೇ ವೈಜ್ಞಾನಿಕ ಕ್ರಮಗಳನ್ನನುಸರಿಸಿ ನಡೆದರೆ ಸಾಲದು. ಅವರ ಮಾನಸಿಕ ಬೆಳವಣಿಗೆಯೂ ವಿಜ್ಞಾನವನ್ನನುಸರಿಸಿಯೇ ಮುಂದುವರಿಯಬೇಕು ಎಂಬ ಅರಿವು ಇನ್ನೂ ಅಷ್ಟುಹೆಚ್ಚಾಗಿ ನಮ್ಮ ಜನರಲ್ಲಿ ಹರಡಿಲ್ಲ. ಈಗ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಡಾ॥ ಗೋಪಾಲಸ್ವಾಮಿಯವರು ಮೈಸೂರು ನಗರದಲ್ಲಿ ಮೂರು ವರ್ಷಗಳಿಂದ ಆರುವರ್ಷಗಳ ವಯಸ್ಸಿನವರೆಗಿನ ಮಕ್ಕಳಿಗೆ ವೈಜ್ಞಾನಿಕ ರೀತಿಯಿಂದ ಪ್ರತ್ಯೇಕ ಶಿಕ್ಷಣವನ್ನು ಕೊಡಲು ಒಂದು ಶಿಶುವಿಹಾರವನ್ನು ಸ್ಥಾಪಿಸಿದರು. ಈಗ ಸುಮಾರು ಹತ್ತು ವರ್ಷಗಳಿಂದೀಚೆಗೆ ಕರ್ನಾಟಕದ ಅನೇಕ ಪಟ್ಟಣಗಳಲ್ಲಿ ಶಿಶುವಿಹಾರಗಳು ಸ್ಥಾಪಿಸಲ್ಪಡುತ್ತಿವೆ. ಎಲ್ಲೆಲ್ಲಿ ಶಿಶುವಿಹಾರಗಳನ್ನು ಸ್ಥಾಪಿಸಿರುವರೋ ಅಲ್ಲೆಲ್ಲಾ ತಾಯಿತಂದೆಗಳು ಅತಿ ಕುತೂಹಲದಿಂದ ತಮ್ಮ ಮಕ್ಕಳನ್ನು ಈ ಶಾಲೆಗಳಿಗೆ ಸೇರಿಸಿರುವರು. ಶ್ರೀಮರ್ತಿ ಸಿ. ರಂಗಾಚಾರ್ ಅವರು "ಶಿಶುವಿಹಾರಗಳು" ಎಂಬ ಪುಟ್ಟ ಗ್ರಂಥವನ್ನು ರಚಿಸಿ† ಜನರಲ್ಲಿ ಈ ವಿಷಯವನ್ನು ಕುರಿತು ಜ್ಞಾನವು ಹೆಚ್ಚುವಹಾಗೆ ಮಾಡಿರುವರು. ಆದರೆ ಮಕ್ಕಳ ಮನಸ್ಸನ್ನು ಕುರಿತು ನಮ್ಮ ಭಾಷೆಯಲ್ಲಿ ಇನ್ನೂ ಹೆಚ್ಚಾಗಿ ಗ್ರಂಥಗಳು ಹೊರಬೀಳಲಿಲ್ಲ. ಮಕ್ಕಳಮನಸ್ಸಿನ ಬಗ್ಗೆ ತಿಳಿವಳಿಕೆಯೂ ಜನರಲ್ಲಿ ಇನ್ನೂ ಹೆಚ್ಚಾಗಿ ಹರಡಿಲ್ಲ.

† ಮೈಸೂರು ವಿಶ್ವವಿದ್ಯಾನಿಲಯದಿಂದ ಈ ಗ್ರಂಥವು ಪ್ರಕಟವಾಗಿದೆ.

ಈ ಜ್ಞಾನವು ಎಷ್ಟರಮಟ್ಟಿಗೆ ಅತ್ಯಾವಶ್ಯಕವೆಂಬುದನ್ನು ಈ ಕೆಳಗಿನ ಉದಾಹರಣೆಗಳಿಂದ ವಿಶದಪಡಿಸಬಹುದು. ಒಂದುವರ್ಷದ ಮಗು ಕುರ್ಚಿಯಮೇಲೆ ಅಥವಾ ಮಂಚದಮೇಲೆ ಕುಳಿತು ತನ್ನ ಕೈಯಲ್ಲಿರುವ ಗೊಂಬೆಯನ್ನೋ, ಆಟಿಗೆಯನ್ನೋ ಕೆಳಗೆ ಹಾಕಿ ಅದನ್ನು ಎತ್ತಿ ತನ್ನ ಕೈಗೆ ಕೊಡುವಂತೆ ತಾಯಿಯನ್ನು ಪ್ರೇರೇಪಿಸುವುದು. ತಾಯಿಯು ಕೆಳಗೆ ಬಿದ್ದ ಆಟಿಗೆಯನ್ನು ಮಗುವಿನ ಕೈಗೆ ತೆಗೆದುಕೊಟ್ಟರೆ ಪುನಃ ಮಗು ಕೆಳಗೆ ಬೀಳಿಸುವುದು. ಬೀಳಿಸಿದ ಸಮಯದಲ್ಲಿ ಅತ್ಯಂತ ಆನಂದವನ್ನು ತೋರಿಸಿ ಕೈಚಪ್ಪಾಳೆ ಹೊಡೆದು ನಗುವುದು. ತಾಯಿಗೂ ಆನಂದವಾಗಿ ಆಟಿಗೆಯನ್ನು ಮತ್ತೊಮ್ಮೆ ತೆಗೆದುಕೊಡುವಳು. ಆದರೆ ಮಗು ಹೀಗೆ ಪದೇ ಪದೇ ಆಟಿಗೆಯನ್ನು ಕೆಳಗೆ ಹಾಕಿ ಮತ್ತೆ ಎತ್ತಿಕೊಡುವಂತೆ ಕಾಡಿಸಿದರೆ ತಾಯಿಗೆ ಕೋಪಬರುವುದು. ಎತ್ತಿಕೊಡದೆ ಹೋದರೆ ಮಗು ಅಳುವುದು, ಚಂಡಿ ಹಿಡಿಯುವುದು, ಇದರಿಂದ ತಾಯಿ ಮಕ್ಕಳಿಬ್ಬರಿಗೂ ಅಸಂತೃಪ್ತಿಯುಂಟಾಗುವುದು. ಈ ಚಂಡಿತನವನ್ನು ಮಗು ಯಾವ ಕಾರಣದಿಂದ ಹಿಡಿಯುವುದು? ತಾಯಿಯನ್ನು ಸುಮ್ಮನೆ ಬೇಸರಪಡಿಸುವುದಕ್ಕೋಸ್ಕರ ಹೀಗೆ ಮಾಡುತ್ತಿರುವುದೇ? ಅಥವಾ ಈ ಆಟವು ಮಗುವಿನ ಬೆಳವಣಿಗೆಯಲ್ಲಿ ಒಂದು ಮುಖ್ಯ ಅಂಶವೇ? ಇವೆಲ್ಲವನ್ನೂ ತಾಯಿಯು ಚೆನ್ನಾಗಿ ಅರಿಯದೆಹೋದರೆ ಮಗುವಿನ ಪೋಷಣೆಯು ಸರಾಗವಾಗಿ ನಡೆಯಲಾರದು.

ಮೂರು ವರ್ಷದ ಮಗು ಕೈಗೆ ಒಂದು ಸೀಮೆಸುಣ್ಣವು ಸಿಕ್ಕಿದರೆ ಬಹಳ ಆನಂದದಿಂದ ಅಚ್ಚುಕಟ್ಟಾದ ನೆಲದಮೇಲೆ ಗೀಚುವುದನ್ನು ನಾವೆಲ್ಲರೂ ನೋಡಿರುವೆವು. ಸೀಮೆಸುಣ್ಣವನ್ನೊ, ಮಸಿಯನ್ನೊ ತೆಗೆದುಕೊಂಡು 'ನಾನು ಗೋಡೆಗೆ ಬಣ್ಣ ಹಾಕುತ್ತೇನೆ' ಎಂದು ಸಿಕ್ಕಾಪಟ್ಟೆ ಗೋಡೆಗಳಮೇಲೆ ಗೀಚುವುದು. ಹೀಗೆಮಾಡುವ

ಮಗುವನ್ನು ನಾವೇನುಮಾಡಬೇಕು? ಮಾಡಲಿ ಎಂದು ಬಿಟ್ಟರೆ ಮನೆಯೆಲ್ಲಾ ಹಾಳಾಗುವುದು. ಮಾಡುವುದನ್ನು ತಡೆದರೆ ಮಗು ಚಂಡಿಹಿಡಿಯುವುದು. ಹೀಗೆ ಮಾಡುವುದು ಮಗುವಿನ ಒಂದು ವಕ್ರ ಗುಣ ಇಲ್ಲವೇ ದುಷ್ಟ ವರ್ತನೆಯೇ?

ಮತ್ತೊಂದು ನಾಲ್ಕು ವರ್ಷದ ಮಗು ತಂದೆ ತಾಯಿಗಳು ಎಷ್ಟೋ ಕಷ್ಟಪಟ್ಟು ಮನೆಯಹಿಂದೆ ಒಂದು ಸಣ್ಣ ತರಕಾರಿ ತೋಟ ವನ್ನು ಬೆಳೆಸಿರುವರು. ದನಕರುಗಳು ಬಂದು ತಿನ್ನದೆ ಇರಲಿ ಎಂದು ಒಂದು ಗಳುವಿನ ಬೇಲಿಯನ್ನು ಕಟ್ಟಿರುವರು. ಮಗು ತಂದೆತಾಯಿ ಗಳು ಮನೆಯಲ್ಲಿಲ್ಲದಿರುವಾಗಲೋ ಅಥವ ಅವರು ಇತರ ಕೆಲಸ ಗಳಲ್ಲಿ ತೊಡಗಿರುವಾಗಲೋ, ಓಡಿಹೋಗಿ ಗಳುಗಳಮೇಲೆ ನೆಗೆದು ಕುಣಿದು, ಸ್ವೇಚ್ಛೆಯಾಗಿ ಆಡಿ ಬೇಲಿಯನ್ನು ನಾಶಪಡಿಸುವುದು. ಮಗು ಈ ಆಟವನ್ನೇ ಏಕೆ ಆಡಬೇಕು? ಕಷ್ಟಪಟ್ಟು ಕಟ್ಟಿರುವ ಬೇಲಿಯನ್ನು ಹಾಳುಮಾಡುವ ಈ 'ದುರ್ಗುಣವು' ಏಕೆ ಬಂದಿತು? ಈಗುಣವನ್ನು ಯಾವರೀತಿಯಿಂದ ಹೋಗಲಾಡಿಸಬೇಕು? ತಂದೆಯು ಕೋಪಗೊಂಡು ಈ 'ದುರ್ಮಾರ್ಗಿಯನ್ನು' ಚೆನ್ನಾಗಿ ಹೊಡೆಯ ಬೇಡವೇ?

ಇನ್ನೊಂದು ಐದುವರ್ಷದ ಮಗು. ತನ್ನ ಮೈಯನ್ನೂ, ಬಟ್ಟೆಗಳನ್ನೂ ಬಹಳ ಶುಭ್ರವಾಗಿ ಇಟ್ಟುಕೊಂಡಿರಬೇಕೆಂದು ತನ್ನ ತಾಯಿಯಿಂದ ಕಲಿತಿರುವುದು. ಸಾಯಂಕಾಲ ಇತರ ಮಕ್ಕಳೊಂದಿಗೆ ಆಡಬೇಕೆಂದು ಹೊರಡುವುದು. ಆ ಮಕ್ಕಳೆಲ್ಲರೂ ಜೇಡಿಮಣ್ಣಿನಲ್ಲಿ ಆಟಿಗೆಗಳನ್ನು ಮಾಡಿಕೊಂಡು ಆಡುತ್ತಿರುವರು. ಈ ಮಗು ಅವ ರೊಡನೆ ಸೇರದೆ 'ನನ್ನ ಕೈ ಬಟ್ಟೆಯೆಲ್ಲಾ ಕೊಳೆಯಾಗುತ್ತೆ, ಈ ಆಟ ನನಗೆ ಬೇಡ' ಎಂದು ಹೇಳಿದರೆ ಮಗುವಿನ ಈ ವರ್ತನೆಯಿಂದ

ತಾಯಿಗೆ ಸಂತೋಷವುಂಟಾಗಬೇಕೆ? ಈ ವಿಧವಾದ ನಡವಳಿಕೆಯು ಆ ವಯಸ್ಸಿನ ಮಗುವಿನಲ್ಲಿ ಕಂಡುಬರುವುದು ಉಚಿತವೇ?

ಕೆಲವು ಸಮಯಗಳಲ್ಲಿ ಮಕ್ಕಳು ಸುಳ್ಳು ಹೇಳುವುದನ್ನು ನಾವು ನೋಡಿದ್ದೇವೆ. ಒಂದು ಕೆಲಸವನ್ನು ಮಗು ಮಾಡಿದೆ ಎಂದು ನಮಗೆ ಗೊತ್ತು. ಆದರೆ ಅದನ್ನು ಕೇಳಿದರೆ 'ನಾನು ಮಾಡಲಿಲ್ಲ' ಎಂದು ಸುಳ್ಳು ಹೇಳುವುದು. ಈ ಸುಳ್ಳು ಹೇಳುವ ಮಗುವನ್ನು ಏನು ಮಾಡಬೇಕು? ಈ ಮಗು ಬೆಳೆದಮೇಲೆ ಬರಿಯ ಸುಳ್ಳುಗಾರನಾಗುವನೇ? ನಿಜವನ್ನೇ ಹೇಳಬೇಕು ಎಂದು ಈ ಮಗುವಿಗೆ ಯಾವ ರೀತಿ ತಿಳಿಯುವಹಾಗೆ ಹೇಳಬೇಕು? ಇಂತಹ ಪ್ರಶ್ನೆಗಳು ಮಕ್ಕಳ ಪೋಷಣೆಯನ್ನು ಮಾಡುತ್ತಿರುವ ಪ್ರತಿಯೊಬ್ಬ ತಂದೆತಾಯಿಗೂ ಪ್ರತಿದಿನವೂ ತಲೆದೋರುವುವು. ಈ ಸನ್ನಿವೇಶಗಳಿಂದ ಮಕ್ಕಳಮೇಲೆ ತಾಯಿತಂದೆಗಳಿಗೆ ಎಷ್ಟೋ ಕೋಪವುಂಟಾಗುವುದು. ಮಕ್ಕಳಿಗೆ ತಾಯಿತಂದೆಗಳ ಮೇಲೆ ಅಸಂತೃಪ್ತಿ ಜಿಗುಪ್ಸೆಗಳುಂಟಾಗುವುವು. ಇಂತಹ ಸಮಸ್ಯೆಗಳನ್ನು ಬಗೆಹರಿಸಬೇಕಾದರೆ ಮಕ್ಕಳ ಮನಶ್ಶಾಸ್ತ್ರವು ನಮಗೆ ನಿರ್ದಿಷ್ಟವಾದ ಮಾರ್ಗವನ್ನು ತೋರಿಸಿಕೊಡಬಲ್ಲುದೇ? ಉಪಯೋಗಕರವಾದ ಸಲಹೆಗಳನ್ನು ಕೊಡಬಲ್ಲುದೇ?

ಒಂದು ಪ್ರತ್ಯೇಕ ಪ್ರಶ್ನೆಗೆ ನಿರ್ದಿಷ್ಟವಾದ ಉತ್ತರವನ್ನು ಕೊಡಬೇಕಾದರೆ ಅನೇಕ ತೊಡಕುಗಳಿವೆ. ಒಂದು ಮಗುವಿಗೂ ಮತ್ತೊಂದು ಮಗುವಿಗೂ ಎಷ್ಟೋ ತಾರತಮ್ಯಗಳಿವೆ. ಒಬ್ಬ ತಾಯಿಗೂ ಮತ್ತೊಬ್ಬ ತಾಯಿಗೂ ಅಂತರವಿದೆ, ಅಲ್ಲದೆ ಒಂದು ಸನ್ನಿವೇಶಕ್ಕೂ ಮತ್ತೊಂದು ಸನ್ನಿವೇಶಕ್ಕೂ ಭಿನ್ನತೆಯಿರುತ್ತದೆ. ಆದುದರಿಂದ ಪ್ರತ್ಯೇಕ ಒಂದು ವರ್ತನೆಯನ್ನು ತೆಗೆದುಕೊಂಡು ಇದನ್ನು ಪರಿಹರಿಸಲು ಮಾರ್ಗವೇನು? ಎಂದು ಕೇಳಿದರೆ ಸಲಹೆ

ಕೊಡುವುದು ಕಷ್ಟಸಾಧ್ಯವೇ ಸರಿ. ಆದರೆ ಮನಶ್ಶಾಸ್ತ್ರವು ನಮಗೆ ಯಾವ ವಿಧವಾದ ಸಹಾಯವನ್ನು ಒದಗಿಸಿಕೊಡಬಲ್ಲುದು? ಮಗುವಿನ ಬೆಳೆವಣಿಗೆಯಲ್ಲಿ ಒಂದು ಕ್ರಮವಿದೆ ಎಂದು ಮನಶ್ಶಾಸ್ತ್ರವು ನಮಗೆ ತೋರಿಸಿಕೊಡುವುದು. ಅನೇಕ ವೈಜ್ಞಾನಿಕರು ಸಾವಿರಾರು ಮಕ್ಕಳನ್ನು ಪರೀಕ್ಷಿಸಿ ಈ ಬೆಳೆವಣಿಗೆಯ ಕ್ರಮವನ್ನು ಕಂಡುಹಿಡಿದಿರುವರು. ಈ ವಿಷಯವನ್ನು ತಾಯಿತಂದೆಗಳು ತಿಳಿದುಕೊಂಡರೆ ಆಗ ತಮ್ಮ ಮಗುವಿನ ಪ್ರತ್ಯೇಕ ವರ್ತನೆಯು ಯಾವ ಕಾರಣದಿಂದ ಉಂಟಾಯಿತು? ಆ ವರ್ತನೆಗೂ ಬೆಳವಣಿಗೆಯ ಕ್ರಮಕ್ಕೂ ಯಾವ ಸಂಬಂಧವಿದೆ ಎಂಬ ವಿವೇಚನೆಯು ಅವರಲ್ಲಿ ಉಂಟಾಗುವುದು. ಮಗುವಿನ ವರ್ತನೆಯನ್ನು ಗಮನವಿಟ್ಟು ಪರಿಶೀಲಿಸಿ, ಆಲೋಚನೆ ಮಾಡಿ ಬಗೆಹರಿಸುವ ಕ್ರಮವನ್ನು ತಂದೆತಾಯಿಗಳು ತಿಳಿಯಕೊಳ್ಳಬಹುದು. ಆದುದರಿಂದ ಈ ಪುಸ್ತಕದ ಮೊದಲನೆಯ ಭಾಗದಲ್ಲಿ ಮಗುವಿನ ಬೆಳೆವಣಿಗೆಯ ಕೆಲವು ಮೆಟ್ಟಲುಗಳನ್ನು ವಿವರಿಸಿದೆ.

ಈ ಕ್ರಮವನ್ನು ಗೆಸ್ಸೆಲರು † ಸ್ಥೂಲವಾಗಿ ಈ ರೀತಿ ಹೇಳಿದ್ದಾರೆ.

"ಮೊದಲ ಮೂರು ತಿಂಗಳಲ್ಲಿ ಕಣ್ಣಿನ ಚಲನೆಗೆ ಕಾರಣವಾದ ಹನ್ನೆರಡು ಪುಟ್ಟಮಾಂಸಖಂಡಗಳ ಮೇಲೆ ಮಗು ಹತೋಟಿಯನ್ನು ಪಡೆಯುವುದು.

"ಎರಡನೆಯ ಮೂರುತಿಂಗಳಿನಲ್ಲಿ (ಹದಿನಾರರಿಂದ ಇಪ್ಪತ್ತೆಂಟು ವಾರಗಳಲ್ಲಿ) ತಲೆಯನ್ನು ಹೊರುವ ಮಾಂಸಖಂಡಗಳ ಮೇಲೆಯೂ ತೋಳನ್ನು ಆಡಿಸುವ ಮಾಂಸಖಂಡಗಳ ಮೇಲೆಯೂ ಹತೋಟಿಯನ್ನು ಪಡೆಯುವುದು: ವಸ್ತುಗಳನ್ನು ಹಿಡಿಯಲು ಯತ್ನಿಸುವುದು.

† ಗೆಸ್ಸೆಲ್—ಫಸ್ಟ್ ಫೈವ್ ಇಯರ್ಸ್ ಆಫ್ ಲೈಫ್



1. 8 ವಾರಗಳ ಮಗು : ಆಟಿಗೆ ಇದ್ದರೂ ನೋಡುವುದಿಲ್ಲ



3. 44 ವಾರಗಳ ಮಗು : ಆಟಿಗೆಯನ್ನು ಕೈಯಲ್ಲಿ ಹಿಡಿದಿರುವುದು



2. 20 ವಾರಗಳ ಮಗು : ಆಟಿಗೆಯಮೇಲೆ ದೃಷ್ಟಿ



4. 52 ವಾರಗಳ ಮಗು : ದಾರದಿಂದ ಆಟಿಗೆಯನ್ನು ಎಳೆದುಕೊಂಡು ಆಡುವುದು

"ಮೂರನೆಯ ಮೂರು ತಿಂಗಳಿನಲ್ಲಿ (ಇಪ್ಪತ್ತೆಂಟರಿಂದ ನಲವತ್ತು ವಾರಗಳ ವರೆಗೆ) ಮಗು ತನ್ನ ಸೊಂಟದ ಮೇಲೆಯೂ, ಕೈಗಳ ಮೇಲೆಯೂ ಹತೋಟಿಯನ್ನು ಪಡೆಯುವುದು. ಕುಳಿತುಕೊಳ್ಳುವುದು, ವಸ್ತುಗಳನ್ನು ಹಿಡಿಯುವುದು, ಕೈಯಿಂದ ಕೈಗೆ ಬದಲಾಯಿಸುವುದು, ವಸ್ತುವನ್ನು ಹಿಡಿದು ಆಡುವುದು.

"ನಾಲ್ಕನೆಯ ಮೂರು ತಿಂಗಳಿನಲ್ಲಿ (ನಲವತ್ತರಿಂದ ಐವತ್ತೆರಡು ವಾರಗಳ ವರೆಗೆ) ಮಗು ತನ್ನ ಹತೋಟಿಯನ್ನು ಕಾಲು ಪಾದಗಳ ವರೆವಿಗೂ ಮುಂದುವರಿಸಿ ಹೆಬ್ಬೆರಳು ಮೊದಲುಬೆರಳುಗಳಮೇಲೆಯೂ ಹತೋಟಿಯನ್ನು ಪಡೆಯುವುದು. ವಸ್ತುಗಳನ್ನು ಚುಚ್ಚಲೂ, ಕೀಳಲೂ ಯತ್ನಿಸುವುದು.

"ಎರಡನೆಯ ವರ್ಷದಲ್ಲಿ ಮಗು ನಡೆಯುವುದು, ಓಡುವುದು, ಮಾತನಾಡಲಾರಂಭಿಸುವುದು, ಜಲಬಾಧೆ, ಮಲಬಾಧೆಗಳ ಮೇಲೆ ಹತೋಟಿ ಇಡುವುದು. ತನ್ನ ವ್ಯಕ್ತಿತ್ವವನ್ನು ಸುಮಾರಾಗಿ ಅರಿಯುವುದು. ಮತ್ತೂ ತನ್ನ ವಸ್ತುಗಳ ಮೇಲೆ ಅಭಿಮಾನವಿಡುವುದು.

"ಮೂರನೆಯ ವರ್ಷದಲ್ಲಿ ಮಾತನ್ನು (ಪದಗಳನ್ನು) ಯೋಚನೆಯ ಸಾಧನವನ್ನಾಗಿ ಉಪಯೋಗಿಸಿ ವಾಕ್ಯಗಳ ಮೂಲಕ ಮಾತನಾಡುವುದು. ತನ್ನ ಆವರಣವನ್ನು ತಿಳಿಯಲು ಕುತೂಹಲವನ್ನು ತೋರಿಸಿ ತಿಳಿವಳಿಕೆಯಿಂದ ವರ್ತಿಸುವುದು. ಇನ್ನು ಮುಂದೆ ಮಗು ಬರಿಯ ಹಸುಳೆಯಲ್ಲ.

"ನಾಲ್ಕನೆಯ ವರ್ಷದಲ್ಲಿ ಅನೇಕ ಪ್ರಶ್ನೆಗಳನ್ನು ಕೇಳಿ ಸಾಮ್ಯಗಳನ್ನು ಅರಿಯುವುದು. ಸಾಮಾನ್ಯ ಲಕ್ಷಣಗಳನ್ನು ತಿಳಿಯಲು ಯತ್ನಿಸುವುದು, ಮನೆಯಲ್ಲಿ ತನ್ನ ದಿನಚರಿಯ ಕೆಲಸಗಳನ್ನು ಬಹಳಮಟ್ಟಿಗೆ ತಾನೇ ಸ್ವತಂತ್ರವಾಗಿ ಮಾಡಿಕೊಳ್ಳುವುದು.

" ಐದು ವರ್ಷಗಳ ವಯಸ್ಸಿನಲ್ಲಿ ತನ್ನ ದೇಹದ ಮಾಂಸಖಂಡಗಳ ಮೇಲೆ ಒಳ್ಳೆಯ ಹತೋಟಿಯನ್ನು ಪಡೆಯುವುದು. ಕುಪ್ಪಳಿಸುವುದು ; ನೆಗೆಯುವುದು ; ಪುಟ್ಟ ಮಗುವಿನ ಉಚ್ಚಾರಣೆಯನ್ನು ಬಿಟ್ಟು ಚೆನ್ನಾಗಿ ಮಾತನಾಡುವುದು; ಸುಮಾರಾದ ದೊಡ್ಡ ಕತೆಯನ್ನು ತಡೆಯಿಲ್ಲದೆ ಹೇಳುವುದು, ಇತರ ಮಕ್ಕಳೊಡನೆ ಆಡಲು ಇಚ್ಛಿಸುವುದು, ತನ್ನ ಉಡುಪುಗಳಲ್ಲಿಯೂ, ಕೆಲಸಗಳಲ್ಲಿಯೂ,

ಹೆಮ್ಮೆಯನ್ನು ತೋರ್ಪಡಿಸುವುದು, ತಕ್ಕ ಮಟ್ಟಿಗೆ ಆತ್ಮಭರವಸೆಯನ್ನು ಪಡೆದು ತನ್ನ ಆವರಣಕ್ಕೆ ಅನುಗುಣವಾಗಿ ವರ್ತಿಸುವುದು"

ಹೀಗೆ ಮೊದಲ ಐದು ವರ್ಷಗಳಲ್ಲಿ ಅದರಲ್ಲಿಯೂ, ಮೊದಲ ಎರಡು ವರ್ಷಗಳಲ್ಲಿ ಅತಿತೀವ್ರವಾದ ಬೆಳೆವಣಿಗೆಯನ್ನು ಮಗು ಪುಡೆಯುವುದು. ಈ ಬೆಳೆವಣಿಗೆಯಲ್ಲಿ ಒಂದು ಮಗುವಿಗೂ, ಮತ್ತೊಂದು ಮಗುವಿಗೂ ಸ್ವಲ್ಪಮಟ್ಟಿಗೆ ಕಾಲವ್ಯತ್ಯಾಸವಿದ್ದರೂ ವರ್ತನೆಯ ತೋರಿಕೆಯು ಒಂದೇ ಕ್ರಮವನ್ನು ಅನುಸರಿಸುವುದೆಂದು ನಾನಾದೇಶಗಳಲ್ಲಿ ಸಾವಿರಾರು ಮಕ್ಕಳ ಪರೀಕ್ಷೆಯ ಫಲಿತಾಂಶಗಳಿಂದ ನಮಗೆ ಕಂಡುಬಂದಿದೆ. ಒಂದು ಗೊತ್ತಾದ ವಯಸ್ಸಿನಲ್ಲಿ ವರ್ತನೆಯ ಬೆಳೆವಣಿಗೆಯು ಯಾವ ರೂಪವನ್ನು ತಾಳುವುದೆಂದು ತಂದೆತಾಯಿಗಳಿಗೆ ಗೊತ್ತಾದರೆ, ಆಗ ತಮ್ಮ ಮಗುವಿನ ವರ್ತನೆಯ ವೈಶಿಷ್ಟ್ಯವನ್ನು ಗುರುತಿಸಲು ಸಾಧ್ಯವಾಗುವುದು. ಮುಂದಿನ ಅಧ್ಯಾಯಗಳಲ್ಲಿ ಒಂದೊಂದು ವಯಸ್ಸಿನಲ್ಲಿಯೂ ಮಗುವಿನ ವರ್ತನೆಯು ಯಾವ ರೂಪನ್ನು ತಾಳುವುದು ಎಂಬ ವಿಷಯವನ್ನು ವಿವರಿಸಲಾಗಿದೆ.

ಎರಡನೆಯ ಭಾಗದಲ್ಲಿ ಮಕ್ಕಳ ಕೆಲವು ವರ್ತನೆಯ ಸಮಸ್ಯೆಗಳನ್ನು ವಿವರಿಸಲಾಗಿದೆ. ಮಗು ಯಾವ ವಯಸ್ಸಿನಲ್ಲಿ ಎಂತಹ ಅಭ್ಯಾಸಗಳನ್ನು ಕಲಿಯಲು ಸಾಧ್ಯವೆಂದು ತೋರಿಸಲಾಗಿದೆ. ಈ ಅಭ್ಯಾಸಗಳನ್ನು ಯಾವ ಕ್ರಮದಿಂದ ಕಲಿಸಲು ಏರ್ಪಡಿಸಬೇಕೆಂಬುದನ್ನು ಸೂಚಿಸಲಾಗಿದೆ. ಊಟಮಾಡುವುದರಲ್ಲಿಯೋ ಸ್ನಾನಮಾಡುವುದಲ್ಲಿಯೋ ಉಡುಪನ್ನು ಧರಿಸುವುದರಲ್ಲಿಯೋ ಅಥವಾ ನಿದ್ದೆ ಮಾಡುವುದರಲ್ಲಿಯೋ ಇಲ್ಲವೇ ಇತರ ಮಕ್ಕಳೊಡನೆ ಸೇರಿ ಆಡಿಕೊಳ್ಳುವುದರಲ್ಲಿಯೋ ಮಗು ಒಂದು ಕಷ್ಟಪರಿಸ್ಥಿತಿಯನ್ನು ತಂದೊಡ್ಡಿಕೊಂಡರೆ, ಅದನ್ನು ತಾಯಿತಂದೆಗಳು ಗಮನಿಸಿ, ಪರ್ಯಾಲೋಚಿಸಿ

ಬಗೆಹರಿಸಬೇಕೇ ಹೊರತು "ಈ ಮಗು ಬಹಳ ಚಂಡಿ" "ಇದರ ಹುಟ್ಟುಗುಣವೇ ಹೀಗೆ" "ಇದರ ಚಾಳಿಯನ್ನು ತಿದ್ದಲು ಯಾರಿಗೂ ಸಾಧ್ಯವಿಲ್ಲ" ಎಂದು ಕೋಪನಿರಾಶೆಗಳನ್ನು ತಾಳಿದರೆ ಪ್ರಯೋಜನ ವಿಲ್ಲ.

ಮಕ್ಕಳ ಮನಶ್ಶಾಸ್ತ್ರದ ಪರಿಶೋಧನೆಗಳ ಒಂದು ಮುಖ್ಯ ಫಲಿತಾಂಶವೇನೆಂದರೆ—ಮಗುವಿನ ವರ್ತನೆ ಅದರ ಅಭ್ಯಾಸಗಳು ಮತ್ತು ಅದರ ಒಳ್ಳೆಯ ಮತ್ತು ಕೆಟ್ಟ ಗುಣಗಳು ಪೋಷಕರ ನಡವಳಿಕೆಯ ಮೇಲೆ ನಿಂತಿವೆ. ಒಳ್ಳೆಯ ಅಭ್ಯಾಸಗಳನ್ನು ಕಲಿತು ಒಂದು ಕ್ರಮದಿಂದ ಮಗುವು ವರ್ತಿಸಿದರೆ ಇದಕ್ಕೆ ಕಾರಣ ಪೋಷಕರೇ ಆಗಿರುವರು. ಮಗು ದುರ್ಮಾರ್ಗಿಯಾಗಿ, ದುರಭ್ಯಾಸಿಯಾಗಿ ಮನೆಯಲ್ಲಿ ಎಲ್ಲರಿಗೂ ಬೇಸರವನ್ನು ಹುಟ್ಟಿಸುವಂತೆ ವರ್ತಿಸಿದರೆ, ಅದಕ್ಕೂ ಪೋಷಕರೇ ಕಾರಣಕರ್ತರು. ರಾತ್ರಿಯವೇಳೆ ಮಗು ಚೆನ್ನಾಗಿ ನಿದ್ದೆಮಾಡದೇ ಹೋದರೆ, ಸ್ನಾನಮಾಡಿಸುವಾಗಲೆಲ್ಲಾ ಚಂಡಿ ಹಿಡಿದರೆ, ಹೊತ್ತಿಗೆ ಸರಿಯಾಗಿ ಮಾಡಿ ಬಡಿಸಿದುದನ್ನು ತಿನ್ನದೆ ಹಟಮಾಡಿದರೆ, ಇವೆಲ್ಲಕ್ಕೂ ಆ ಮಗುವಿನ ಪೋಷಣೆಯಲ್ಲಿರುವ ಕುಂದುಕೊರತೆಗಳೇ ಕಾರಣವಾಗಿರುವುವು.

ಈ ವಿಪರೀತವರ್ತನೆಗಳನ್ನು ತಾಯಿಯು ಎಷ್ಟು ಶ್ರಮಪಟ್ಟರೂ ತಿದ್ದುವುದಕ್ಕೆ ಸಾಧ್ಯವಾಗದೇ ಹೋದರೆ, ಮಗು ಹಟಮಾರಿಯಾಗಿ ಬೆಳೆದು, ಸುಳ್ಳುಗಾರನಾಗಿ ಅಥವಾ ಕಳ್ಳನಾಗಿ ಅಥವಾ ಕ್ರೂರಿಯಾಗಿ ಇತರರಿಗೆ ದೇಹಹಾನಿಯನ್ನುಂಟುಮಾಡಿ, ಅನೇಕವಿಧಗಳಲ್ಲಿ ಸಮಾಜಕ್ಕೆ ವಿರುದ್ಧವಾದ ಕೆಲಸಗಳನ್ನೇ ಮಾಡುತ್ತಾ ಬೆಳೆದು ಕೊನೆಗೆ ಕಟುತರವಾದ ಅಪರಾಧವನ್ನು ಮಾಡಿ ಜೈಲಿಗೆ ಹೋಗುವನು.

ಚಿಕ್ಕಂದಿನಲ್ಲಿ ಸರಿಯಾದ ಅಭ್ಯಾಸಗಳನ್ನು ಕಲಿಯದಿರುವ ಮಗು, ಹುಡುಗನಾದಮೇಲೆ ದುಷ್ಟ ಹುಡುಗರ ಸಹವಾಸವನ್ನು

ಬೆಳೆಸಿ, ಶಾಲೆಗೆಂದು ಹೊರಟು ಬೀದಿ ಬೀದಿ ಅಲೆದು, ಮನೆಯಿಂದ ಕದ್ದುತಂದ ಹಣಕಾಸುಗಳನ್ನುಅಂಗಡಿಗೆ ಹಾಕಿ, ತಾಯಿತಂದೆಗಳಿಗೆ ಅವಮಾನವಾಗುವಂತೆ ವರ್ತಿಸುತ್ತಿದ್ದು, ಇನ್ನೂ ದೊಡ್ಡವನಾದ ಮೇಲೆ ತಂದೆಯ ಆಸ್ತಿಯನ್ನು ಸಿಕ್ಕಾಬಟ್ಟೆ ಖರ್ಚುಮಾಡಿ, ಮನೆಯವರನ್ನು ಬಡತನ ರೋಗ ಮೊದಲಾದ ಸಂಕಟಗಳಿಗೆ ಗುರಿಮಾಡುವನು.. ಈ ವರ್ತನೆಯ ಬೆಳೆವಣಿಗೆಯನ್ನು ಶ್ರೀ ಶಿವರಾಮಕಾರಂತರ 'ಮರಳಿಮಣ್ಣಿಗೆ'ಯ 'ಲಚ್ಚ'ನಲ್ಲಿ ಸ್ಪಷ್ಟವಾಗಿ ಕಾಣಬಹುದು. ಕಾರಂತರ ಈ 'ಲಚ್ಚ' ಅಪರೂಪವ್ಯಕ್ತಿಯಲ್ಲ. ಈ ಪುಸ್ತಕವನ್ನೋದುವ ಒಬ್ಬೊಬ್ಬರೂ ತಮ್ಮ ನೆಂಟರಲ್ಲಿಯೋ ಅಥವಾ ಸ್ನೇಹಿತರ ಕುಟುಂಬಗಳಲ್ಲಿಯೋ ಇಂತಹ ವ್ಯಕ್ತಿಯನ್ನು ಕಂಡಿರಬಹುದು.

ಈ ರೀತಿಯ ವಿಪರೀತ ವರ್ತನೆಗಳನ್ನು ತೋರಿಸುವ ಮಕ್ಕಳನ್ನು ಯಾವ ವಿಧದಿಂದ ಸರಿಪಡಿಸಬಹುದು? ಇದಕ್ಕಾಗಿ ಪಾಶ್ಚಾತ್ಯ ದೇಶಗಳಲ್ಲಿ ಮಕ್ಕಳ ವರ್ತನಾ ಚಿಕಿತ್ಸಾಲಯ (ಚೈಲ್ಡ್ ಗೈಡೆನ್ಸ್ ಕ್ಲಿನಿಕ್) ಗಳನ್ನು ಸ್ಥಾಪಿಸಿರುವರು. ಈ ಸಂಸ್ಥೆಗಳಲ್ಲಿ ಮಕ್ಕಳ ಮನಸ್ಸನ್ನು ಚೆನ್ನಾಗಿ ಅರಿತಿರುವ ಮನಶ್ಶಾಸ್ತ್ರಜ್ಞರೂ, ವೈದ್ಯರೂ, ಮಕ್ಕಳನ್ನೂ, ಅವರನ್ನು ಕರೆತರುವ ತಂದೆತಾಯಿಗಳನ್ನೂ ಪರೀಕ್ಷಿಸಿ ತಕ್ಕ ಸಲಹೆಯನ್ನು ಕೊಟ್ಟು ವಿಪರೀತ ವರ್ತನೆಗಳನ್ನು ಸರಿಪಡಿಸುವರು. ನಮ್ಮ ದೇಶದಲ್ಲಿ, ಬೊಂಬಾಯಿ, ಕಲ್ಕತ್ತ, ದೆಹಲಿ ಮುಂತಾದ ದೊಡ್ಡ ನಗರಗಳಲ್ಲಿಯೂ, ಮಾನಸಿಕ ರೋಗಗಳ ಆಸ್ಪತ್ರೆ (ಮೆಂಟಲ್ ಹಾಸ್ಪಿಟಲ್ ) ಗಳಲ್ಲಿಯೂ ಇಂತಹ ಚಿಕಿತ್ಸಾಲಯಗಳನ್ನು ಸ್ಥಾಪಿಸಿರುವರು. ಆದರೆ ಇವುಗಳ ಸಂಖ್ಯೆ ತೀರಾ ಕಡಿಮೆ. ಈ ಚಿಕಿತ್ಸಾಲಯಗಳು ಹೆಚ್ಚಿದರೆ ಸಮಾಜದಲ್ಲಿ ಕಳ್ಳಹುಡುಗರು ಜೇಬುಗಳ್ಳರೂ, ಸೋಮಾರಿಗಳೂ, ಹುಚ್ಚರೂ ಕಡಿಮೆಯಾಗುವರು.

ಈ ವರ್ತನ ಚಿಕಿತ್ಸಾಲಯಗಳಲ್ಲಿ ಕಂಡುಬಂದಿರುವ ಮುಖ್ಯಾಂಶ ವೇನೆಂದರೆ—ಮಗುವಿನ ಈ ವಿಪರೀತ ವರ್ತನೆಗಳಿಗೆ ತಂದೆತಾಯಿಗಳ ವಿಪರೀತ ವರ್ತನೆಯೇ ಕಾರಣ. ಒಂದು ಮಗು ದುರಭ್ಯಾಸಗಳಿಂದ ತಾಯಿತಂದೆಗಳಿಗೆ ದುಃಖವನ್ನುಂಟುಮಾಡುತ್ತಿದ್ದರೆ, ಆ ಮನೆಯಲ್ಲಿ ಮಗುವಿಗೂ, ತಾಯಿಗೂ ಅಥವಾ ಮಗುವಿಗೂ ತಂದೆಗೂ ಸರಿಯಾದ ಸಂಬಂಧವಿಲ್ಲವೆಂದರ್ಥ. ಆದುದರಿಂದ ಈ ವರ್ತನಚಿಕಿತ್ಸಾಲಯಗಳಲ್ಲಿ ವಿಪರೀತವರ್ತನೆಯನ್ನು ತೋರಿಸುವ ಮಗುವನ್ನು ಪರಿಶೀಲಿಸುವುದೇ ಅಲ್ಲದೆ, ಆ ಮಗುವಿನ ತಂದೆತಾಯಿಗಳಿಗೂ ಮಗುವಿಗೂ ಇರುವ ಸಂಬಂಧವನ್ನು ಪರಿಶೀಲಿಸುವರು. ತಾಯಿತಂದೆಗಳ ಆಶಾ-ನಿರಾಶೆಗಳೂ ಮಗುವಿನ ದುರಭ್ಯಾಸಗಳಿಗೆ ಕಾರಣವಾಗುವುವು.

ಒಬ್ಬ ತಾಯಿಯು ತನ್ನ ಮಗುವನ್ನು ಒಂದು ವರ್ತನ ಚಿಕಿತ್ಸಾಲಯಕ್ಕೆ ಕರೆತಂದಳು. ಈ ಮಗುವಿಗೆ ಆರು ವರ್ಷವಾಗಿತ್ತು, 'ಇನ್ನೂ ತನ್ನ ಬಟ್ಟೆಗಳನ್ನು ತಾನೇ ಹಾಕಿಕೊಳ್ಳುವುದಿಲ್ಲ; ಇದನ್ನು ಸರಿಪಡಿಸುವುದು ಹೇಗೆ?' ಎಂದು ಕೇಳಿದಳು. ಪ್ರಶ್ನೆಗಳನ್ನು ಕೇಳಿ ಪರೀಕ್ಷಿಸಿ ನೋಡಿದ್ದರಲ್ಲಿ ಆಕೆಗೆ ಗಂಡನಮೇಲೆ ಜುಗುಪ್ಸೆ ಇತ್ತೆಂದು ಗೊತ್ತಾಯಿತು. ಆತನು ತನ್ನ ಕೆಲಸಗಳಲ್ಲಿ ಈಕೆಯು ನಿರೀಕ್ಷಿಸಿದಷ್ಟು ಚುರುಕನ್ನು ತೋರಿಸದೆ, ನಿಧಾನವಾಗಿದ್ದುದೇ ಈಕೆಗೆ ಆತನ ಮೇಲೆ ಜುಗುಪ್ಸೆಗೆ ಕಾರಣ. ಈ ಜುಗುಪ್ಸೆ ಮಗುವಿನ ಮೇಲೆ ತಿರುಗಿತು. ಆಗ ಮಗು ತನ್ನ ಕೆಲಸಗಳನ್ನು ಬೇಗ ಬೇಗ ಮಾಡುವುದಿಲ್ಲ—ಮಾಡಲಿಲ್ಲವೆಂದು ಆ ಮಗುವಿನ ಮೇಲೆ ಜುಗುಪ್ಸೆಯುಂಟಾಯಿತು. ಮಗು ಬಟ್ಟೆ ಹಾಕಿಕೊಳ್ಳುವಾಗ ಈಕೆಯು ತಾಳ್ಮೆಯಿಲ್ಲದೆ ಅದು ಬಟ್ಟೆಯನ್ನು ಹಾಕಿಕೊಳ್ಳುತ್ತಿರುವಷ್ಟರಲ್ಲಿಯೇ ತಾನೇ ಮಗುವಿಗೆ ಸಹಾಯಮಾಡಿ, ಮಗುವನ್ನು ನಿಂದಿಸತೊಡಗಿದಳು. ಆಕೆಗೆ ತನ್ನ ಗಂಡನಮೇಲೆ ಕಾರಣಾಂತರ

ಗಳಿದುಂಟಾದ ಜುಗುಪ್ಸೆಯನ್ನು ವೈದ್ಯರೂ ಮನಶ್ಶಾಸ್ತ್ರಜ್ಞರೂ ತೋರಿಸಿಕೊಡದೇ ಹೋಗಿದ್ದರೆ ಮಗುವಿನ ಬಾಳೂ ಆಕೆಯ ಬಾಳೂ ಕಷ್ಟಸಾಧ್ಯವಾಗುತ್ತಿತ್ತು.

ಮತ್ತೊಂದು ಉದಾಹರಣೆ—ಎಷ್ಟೋ ಸಮಯಗಳಲ್ಲಿ ಅತ್ತೆಯ ಮೇಲೆ ಕೋಪಗೊಂಡಿರುವಾಕೆಯು ತನ್ನ ಮಗುವನ್ನು ಹೊಡೆದೋ ಬೈದೋ ತನ್ನ ಕೋಪವನ್ನು ತೀರಿಸಿಕೊಳ್ಳುವುದು ಸಾಮಾನ್ಯ ನಡವಳಿಕೆ.

ಆದುದರಿಂದ ತಾಯಿತಂದೆಗಳು ತಮ್ಮ ಮಗುವಿನ ವರ್ತನೆಗೆ ತಾವೇ ಕಾರಣರೆಂಬ ಅಂಶವನ್ನು ನೆನಪಿನಲ್ಲಿಡಬೇಕು. ಮಗು ಸರಿಯಾದ ರೀತಿಯಲ್ಲಿ ವರ್ತಿಸದೇ ಹೋದರೆ, ಆ ಕೆಟ್ಟ ಅಥವಾ ಅಸಹ್ಯ ವರ್ತನೆಗೆ ಕಾರಣಗಳೇನಾಗಿರಬೇಕು? ಅದಕ್ಕೆ ತಾವು ಎಷ್ಟರ ಮಟ್ಟಿಗೆ ಜವಾಬ್ದಾರರು ಎಂಬುದನ್ನು ಪರ್ಯಾಲೋಚಿಸಬೇಕು.

ವಾಟ್ಸನ್ † ಹೇಳಿರುವಂತೆ ಸುಖಿಯಾದ ಮಗುವಿನ ಲಕ್ಷಣಗಳು ಈ ರೀತಿ ಇವೆ.

"ಮಗು ತನಗೆ ನೋವುಂಟಾದಾಗ ಮಾತ್ರ ಅಳುವುದು. ತನ್ನ ಆಟಪಾಟಗಳಲ್ಲಿ ನಿಮಗ್ನನಾಗುವುದು; ಸಣ್ಣ ಪುಟ್ಟ ತೊಂದರೆಗಳನ್ನು ತಂದೆತಾಯಿಗಳ ಸಹಾಯವನ್ನು ಕೋರದೆ ತಾನೇ ನಿವಾರಿಸಿಕೊಳ್ಳುವುದು. ಕಷ್ಟಗಳಿಂದ ಪಾರುಮಾಡಲನುಕೂಲವಾಗವಂತಹ ಅಭ್ಯಾಸಗಳನ್ನು ಕಲಿಯುವುದು. ದೊಡ್ಡವರು ಮಗುವಿನೊಡನೆ ಇರಬೇಕೆಂದು ಇಚ್ಛಿಸುವಂತೆ ಮರ್ಯಾದೆ, ಸ್ವಚ್ಛತೆ ಮುಂತಾದ ಸದ್ಗುಣಗಳನ್ನುಪಡೆದಿರುವುದು. ದೊಡ್ಡವರ ಮಧ್ಯೆಯಿದ್ದರೂ, ಅವರ ಗಮನ

† ವಾಟ್ಸನ್—ಸೈಕಲಾಜಿಕಲ್ ಕೇರ್ ಆಫ್ ಇನ್‌ಫೆಂಟ್ ಅಂಡ್ ಚೈಲ್ಡ್

ವನ್ನು ತನ್ನ ಕಡೆಗೆ ಸೆಳೆಯಲು ಪ್ರಯತ್ನಮಾಡದಿರುವುದು. ಮಾಡಿ ಬಡಿಸಿದುದನ್ನು ತೃಪ್ತಿಯಿಂದ ಊಟ ಮಾಡುವುದು. ಸಕಾಲದಲ್ಲಿ ವಿಶ್ರಾಂತಿ ನಿದ್ದೆಗಳನ್ನು ಪಡೆಯುವುದು. ಮೂರನೆಯ ವರ್ಷದ ವಯಸ್ಸಿಗೆ ಬರುವ ಹೊತ್ತಿಗೆ ಎರಡನೆಯ ವರ್ಷದ ವಯಸ್ಸಿನಲ್ಲಿದ್ದ ಹಳೆಯ ಅನುಪಯೋಗವಾದ ಅಭ್ಯಾಸಗಳನ್ನು ಬಿಟ್ಟು ಬಿಡುವುದು. ಬಾಲ್ಯಾವಸ್ಥೆಯಿಂದ ಕೌಮಾರ್ಯ ಮತ್ತು ಯೌವನಾವಸ್ಥೆಗಳಿಗೆ ಕಾಲಿಡುವಾಗ ಯಾವ ತಡೆ ತೊಂದರೆಗಳೂ ಇಲ್ಲದೆ ಅನಾಯಾಸವಾಗಿ ಮುಂದುವರಿಯುವುದು. ಪ್ರೌಢಾವಸ್ಥೆಯನ್ನು ಪಡೆಯುವ ಹೊತ್ತಿಗೆ ಸ್ಥಿರ ಬುದ್ಧಿಯಿಂದ ಕೆಲಸ ಮಾಡುವ ಅಭ್ಯಾಸಗಳನ್ನು ಕಲಿತು ಸಮತ್ವದಿಂದ ಕೂಡಿದ † ಭಾವ ಜೀವನವನ್ನು ಬೆಳೆಸಿಕೊಂಡು ಕಷ್ಟಗಳಿಗೆ ಎದೆಗುಂದದೆ ಗುರಿಯನ್ನು ಸಾಧಿಸುವ ದೃಢತೆ ಮತ್ತು ಸಾಮರ್ಥ್ಯಗಳನ್ನು ಪಡೆದಿರುವುದು"

† ಕೋಪ, ಭಯ ಮುಂತಾದ ಭಾವೋದ್ರೇಕಗಳ ಮೇಲಿನ ಹತೋಟಿ.

# ಅಧ್ಯಾಯ ೨.

## ಮಗುವಿನ ಮೊದಲ ವರ್ಷ

ಮಗುವಿನ ವಯಸ್ಸು ಹೆಚ್ಚಿದಂತೆಲ್ಲಾ ಅದರ ದೇಹವೂ ಬೆಳೆಯುವುದು. ಗಾತ್ರದಲ್ಲಿ ದೊಡ್ಡದಾಗುವುದು. ಶಕ್ತಿ ಹೆಚ್ಚುವುದು. ಅಲ್ಲದೆ ದೇಹದ ನಾನಾಭಾಗಗಳ ಪರಸ್ಪರ ಪ್ರಮಾಣವು ಬದಲಾಯಿಸುವುದು. ಕೈ ಕಾಲುಗಳು ಮೊದಲು ದೇಹದ ಪ್ರಮಾಣಕ್ಕೆ ಕಡಮೆಯಾಗಿದ್ದು ಕ್ರಮೇಣ ಅವು ಇತರ ಭಾಗಗಳಿಗಿಂತ ಉದ್ದವಾಗುವುವು. ಮೊದಲು ತಲೆಯು ದೇಹದ ಇತರ ಭಾಗಗಳಿಗಿಂತ ದಪ್ಪನಾಗಿ ಕಾಣಿಸುತ್ತಿದ್ದು, ಬೆಳೆಯುತ್ತ ಬೆಳೆಯುತ್ತ ಇತರ ಭಾಗಗಳು ಹೆಚ್ಚು ತೀವ್ರತೆಯಿಂದ ಬೆಳೆದು, ತಲೆಯ ಗಾತ್ರದ ಪ್ರಮಾಣವು ಕಡಮೆಯಾಗುವುದು. ತಲೆಯ ಗಾತ್ರವು ಮಗುವಿನ ಆರನೆಯ ವಯಸ್ಸಿನಲ್ಲಿ ವಯಸ್ಕರ ತಲೆಯ ಗಾತ್ರದ ಶೇಕಡ ತೊಂಭತ್ತರಷ್ಟಿರುವುದು. ಆದರೆ ಕತ್ತಿನಿಂದ ಸೊಂಟದವರೆಗಿನ ಭಾಗವೂ, ಕೈ ಕಾಲುಗಳೂ ಸಾಧಾರಣವಾಗಿ ಹದಿನಾರು ಹದಿನೆಂಟು ವರ್ಷ ವಯಸ್ಸಿನವರೆವಿಗೂ ಬೆಳೆಯುತ್ತ ಹೋಗುವುವು. ಅಂಗಾಂಗಗಳ ಮೇಲಿನ ಸ್ವಾಧೀನವೂ ಕ್ರಮವಾಗಿ ಹೆಚ್ಚುತ್ತ ಹೋಗುವುದು.

ದೇಹದ ಬೆಳೆವಣಿಗೆಯೊಡನೆಯೇ ಮಗುವಿನ ಮನಸ್ಸಿನಲ್ಲಿಯೂ ಬೆಳೆವಣಿಗೆಯು ಕಂಡುಬರುವುದು. ಅಂಗಗಳ ಚತುರತೆಯು ಹೆಚ್ಚುವುದು. ಆವರಣದಲ್ಲಿರುವ ಪದಾರ್ಥಗಳ ಮತ್ತು ವ್ಯಕ್ತಿಗಳ ಜ್ಞಾನವೂ ಹೆಚ್ಚುವುದು. ಅಭಿರುಚಿಗಳು ಬದಲಾಯಿಸುವುವು.

ಭಾಷಾಜ್ಞಾನವು ಬೆಳೆದು ಮಗು ತನ್ನ ಕೆಲಸಗಳನ್ನು ಸರಾಗವಾಗಿ ಮಾಡಿಕೊಳ್ಳಲು ಭಾಷೆಯು ಸಾಧನವಾಗುವುದು.

ಹೀಗೆ ಮಗುವಿನ ವಯಸ್ಸಿಗೂ, ಅದರ ಬೆಳೆವಣಿಗೆಯ ಮಟ್ಟಕ್ಕೂ ಒಂದು ನಿಕಟಸಂಬಂಧವಿರುವುದು. ಈ ಸಂಬಂಧವನ್ನು ಕುರಿತ ಜ್ಞಾನವು ಮಕ್ಕಳನ್ನು ತಿಳಿವಳಿಕೆಯಿಂದ ಬೆಳೆಸಲು ಸಹಕಾರಿಯಾಗುವುದು. ಯಾವ ವಯಸ್ಸಿನಲ್ಲಿ ಮಗು ತಾನೇ ಊಟಮಾಡಬಲ್ಲುದು? ಕೈಕಾಲುಗಳನ್ನು ತೊಳೆದುಕೊಳ್ಳಬಲ್ಲುದು? ತನ್ನ ಉಡುಪುಗಳನ್ನು ತಾನೇ ಹಾಕಿಕೊಳ್ಳಬಲ್ಲುದು? ತಾನೇ ಸ್ನಾನ ಮಾಡಬಲ್ಲುದು? ಇವೇ ಮೊದಲಾದ ವಿಷಯಗಳು ತಾಯಿಗೆ ಗೊತ್ತಾದರೆ, ಶಿಶುಪೋಷಣೆಯು ಒಂದು ಕ್ರಮದಿಂದಲೂ, ಸುಗಮವಾಗಿಯೂ ನಡೆಯುವುದು. ಈ ತಿಳಿವಳಿಕೆಯು ಇಲ್ಲದೆ ಹೋದರೆ ತಾಯಿಯು ಮಗುವನ್ನು ಇನ್ನೂ 'ಪುಟ್ಟಕೂಸು' ಎಂದು ಭಾವಿಸಿ ಅದಕ್ಕೆ ಬೇಕಾಗಿಲ್ಲದಿರುವ ಸಹಾಯಗಳನ್ನು ಮಾಡಿ ಮಗುವಿನ ಬೆಳೆವಣಿಗೆಗೆ ಅಡಚಣೆಯನ್ನು ತಂದೊಡ್ಡುವಳು. ಅಥವಾ "ಈ ಮಗು ದಡ್ಡಮಗು, ಇನ್ನೂ ತನ್ನ ಕೆಲಸಗಳನ್ನು ತಾನೇ ಮಾಡಿಕೊಳ್ಳುವುದಿಲ್ಲ" ಎಂದು ವಯಸ್ಸಿಗೆ ಮುಂಚೆಯೇ ಮಗು ತನ್ನ ಕೆಲಸಗಳನ್ನು ತಾನೇ ಮಾಡಿಕೊಳ್ಳಬೇಕೆಂದು ನಿರೀಕ್ಷಿಸಿ ಅದು ಮಾಡಿಕೊಳ್ಳದೆ ಹೋದರೆ ನಿರಾಸೆ ಬೇಸರಗಳನ್ನು ತೋರ್ಪಡಿಸುವಳು. ಕೈಯಲ್ಲಾಗದಿರುವ ಕೆಲಸಗಳನ್ನು ಮಗು ಮಾಡಲಿಲ್ಲವೆಂದು ಕೋಪಗೊಳ್ಳುವಳು. ಈ ಎರಡು ಅನುಚಿತ ಪದ್ಧತಿಗಳನ್ನೂ ಮಗುವಿನ ಬೆಳೆವಣಿಗೆಯ ಕ್ರಮದ ತಿಳಿವಳಿಕೆಯು ದೂರಮಾಡುವುದು.

ಈ ತಿಳಿವಳಿಕೆಯು ಮತ್ತೊಂದು ಮಾರ್ಗದಲ್ಲಿಯೂ ಬಹಳ ಸಹಕಾರಿಯಾಗುವುದು. ಮಗು ತನ್ನ ಬೆಳೆವಣಿಗೆಯ ಒಂದೊಂದು ಕಾಲಕ್ಕೂ ಅನುಸಾರವಾಗಿ ಆಡಿಕೊಳ್ಳುವುದು. ಈ ಆಟಗಳಿಗೆ ಉಪ

ಯುಕ್ತವಾದ ಸಲಕರಣೆಗಳನ್ನು ಒದಗಿಸುವುದು ಬಹಳ ಆವಶ್ಯಕ. ಆಟಿಗೆಗಳನ್ನು ಸರಿಯಾಗಿ ಒದಗಿಸಿಕೊಡಬೇಕಾದರೆ ಮಗುವಿನ ಬೆಳೆವಣಿಗೆಯ ಕ್ರಮವನ್ನು ತಿಳಿದಿರಬೇಕು. ಇಲ್ಲದಿದ್ದರೆ ವಯಸ್ಸಿಗೆ ಮೀರಿದ ಆಟಿಗೆಗಳನ್ನು ಕೊಟ್ಟಾಗ ಮಗುವು ಸ್ವಲ್ಪಹೊತ್ತು ಆಡಿಕೊಂಡು ಅವುಗಳನ್ನು ಒಂದು ಕಡೆ ಬಿಸಾಡಿಬಿಡುವುದು ; ಚೆಂಡಿ ಹಿಡಿಯುವುದು ; ತಾಯಿಯ ದಿನಚರಿಗೆ ತೊಂದರೆಯನ್ನುಂಟುಮಾಡುವುದು. ವಯಸ್ಸಿಗೆ ಕಡಮೆಯಾದ ಆಟಿಗೆಗಳನ್ನು ಕೊಟ್ಟರೆ ಮಗುವಿಗೆ ನಿರಾಶೆ ಹುಟ್ಟಿ ಅವುಗಳನ್ನು ಬಿಸಾಡಿಬಿಡುವುದು. ಅಥವಾ ಆಟಿಗೆಗಳಲ್ಲಿಯೇ ಮಗ್ನನಾಗಿ ಆಡಿಕೊಂಡರೂ ಮಗುವಿನ ಬೆಳೆವಣಿಗೆಗೆ ಇವರಿಂದ ಕುಂದುಕವುಂಟಾಗುವುದು. ವಯಸ್ಸಿಗೆ ತಕ್ಕ ಆಟಿಗೆಗಳನ್ನು ಮಗುವಿಗೆ ಕೊಟ್ಟರೆ ಅದು ತನ್ನ ಆಟದಲ್ಲಿ ಆಸಕ್ತಿಯಿಟ್ಟು ಆಡಿಕೊಂಡು ತಂದೆ ತಾಯಿಗಳಿಗೆ ತೊಂದರೆಯನ್ನು ಕೊಡುವುದಿಲ್ಲ ; ಅಲ್ಲದೆ ಮಗುವಿನ ಬೆಳೆವಣಿಗೆಯೂ ಸರಾಗವಾಗಿ ಮುಂದುವರಿಯುವುದು.

ಒಂದೊಂದು ವಯಸ್ಸಿಗೆ ಸರಿಯಾಗಿ ಮಗುವಿನ ಬೆಳೆವಣಿಗೆಯು ಕ್ರಮದಿಂದ ನಡೆಯುವುದು. ಇದು ಎಲ್ಲಾ ತಂದೆ ತಾಯಂದರಿಗೂ ಗೊತ್ತಾದ ವಿಷಯ. ಆದುದರಿಂದಲೇ "ನಮ್ಮ ರಾಮು ಇನ್ನೂ ತಾನೇ ಕುಳಿತುಕೊಳ್ಳುವುದಿಲ್ಲ." "ನಮ್ಮ ನಾಗು ಇಷ್ಟು ವಯಸ್ಸಾದರೂ ಇನ್ನೂ ನಡೆಯಲಾರಳು" "ಪಾಪ ರತ್ನ ಎರಡೂವರೆ ವರುಷ ವಯಸ್ಸಾದರೂ ಇನ್ನೂ ಮಾತನಾಡುವುದಿಲ್ಲ" ಎಂದು ಹೇಳುವುದನ್ನು ಕೇಳಿದ್ದೇವೆ. ಈ ಮಾತುಗಳ ಹಿಂದೆ ಮಗುವಿನ ಬೆಳೆವಣಿಗೆಯು ಅದರ ವಯಸ್ಸಿಗೆ ತಕ್ಕಂತೆ ಇರಬೇಕೆಂಬ ತಿಳಿವಳಿಕೆಯು ಅಡಗಿರುವುದು. ಆದರೆ ಇದು ನಿರ್ದಿಷ್ಟವಾದ ತಿಳಿವಳಿಕೆಯಲ್ಲ. ಮನಶ್ಶಾಸ್ತ್ರಜ್ಞರು ಸಾವಿರಾರು ಮಕ್ಕಳನ್ನು ಪರೀಕ್ಷಿಸಿ ಒಂದೊಂದು ವಯಸ್ಸಿಗೂ

ಯಾವ ಕೆಲಸಗಳನ್ನು ಮಗು ಮಾಡಬಲ್ಲುದೆಂದು ಕಂಡುಹಿಡಿದಿರುವರು. ಪುಣ್ಯವಂತರ ಮಕ್ಕಳು, ಬಡವರ ಮಕ್ಕಳು, ತಾಯಿತಂದೆಗಳಿರುವ ಮಕ್ಕಳು, ಅನಾಥಮಕ್ಕಳು, ವಿದ್ಯಾವಂತರ ಮಕ್ಕಳು, ಅವಿದ್ಯಾವಂತರ ಮಕ್ಕಳು ಈ ಎಲ್ಲ ಮಕ್ಕಳನ್ನೂ ಪರೀಕ್ಷಿಸಿ ಒಂದು ನಿರ್ದಿಷ್ಟವಾದ ವಯಸ್ಸಿನಲ್ಲಿ ಮಗುವು ಯಾವ ಕೆಲಸಗಳನ್ನು ಕುಶಲತೆಯಿಂದ ಮಾಡಬಲ್ಲುದೆಂಬುದನ್ನು ಕಂಡುಹಿಡಿದಿರುವರು. ಮುಖ್ಯವಾಗಿ ಅಮೆರಿಕದ ಗೆಸ್ಸೆಲ್ ಎಂಬುವರೂ, ಆಸ್ಟ್ರಿಯಾದ ಬ್ಯೂಲರ್ ಎಂಬಾಕೆಯೂ ಈ ಪರೀಕ್ಷಣಗಳನ್ನು ನಡಸಿ ಮಕ್ಕಳ ಬೆಳೆವಣಿಗೆಯ ಕ್ರಮದ ಜ್ಞಾನವನ್ನು ಒದಗಿಸಿಕೊಟ್ಟಿರುವರು.

**ಹುಟ್ಟಿದ ದಿನ:**—ಮಗುವಿನ ಮೊದಲನೆಯ ವರ್ಷದಲ್ಲಿ ಬೆಳೆವಣಿಗೆಯು ಹೇಗೆ ಮುಂದುವರಿಯುವುದೆಂದು ನೋಡೋಣ. ತಾಯಿಯ ಗರ್ಭದಲ್ಲಿಯೇ ಮಗುವಿನ ಜೀರ್ಣೇಂದ್ರಿಯಗಳೂ ಶ್ವಾಸಕೋಶಗಳು, ಶುದ್ಧೀಕರಣಾಂಗಗಳು ಇವೇ ಮೊದಲಾದ ಅವಯವಗಳೆಲ್ಲವೂ ರಚಿತವಾಗಿದ್ದರೂ ಆ ಅವಯವಗಳು ಮಗುವು ಜನಿಸಿದ ನಂತರವೇ ಕೆಲಸಮಾಡಲಾರಂಭಿಸುವುವು. ಹುಟ್ಟಿದ ಕೂಡಲೇ ಮಗುವು ಮೊಟ್ಟಮೊದಲು ಮಾಡುವ ಕೆಲಸವೆಂದರೆ ಅಳುವುದು. ಮಗು ತಾನು ಈ ದುಃಖಪೂರಿತವಾದ ಪ್ರಪಂಚಕ್ಕೆ ಬಂದೆನಲ್ಲಾ ಎಂದು ಅಳುವುದೆಂದು ಕೆಲವರು ಹೇಳುವರು. ಮತ್ತೆ ಕೆಲವರು ತಾಯಿಯ ಗರ್ಭದಿಂದ ಹೊರಗೆ ಬರುವಾಗ ಸಂಭವಿಸಿದ ನೋವನ್ನು ಸೂಚಿಸುವುದೆಂದು ಹೇಳುವುದುಂಟು. ಆದರೆ ಈ ಎರಡು ಹೇಳಿಕೆಗಳೂ ತಪ್ಪುತಿಳಿವಳಿಕೆಯಿಂದುಂಟಾದುವು. ಮಗು ಶ್ವಾಸವಾಡುವುದಕ್ಕೋಸ್ಕರ ಮೊದಲು ಗಾಳಿಯನ್ನು ಒಳಕ್ಕೆ ಎಳೆದುಕೊಳ್ಳುವುದು. ಆ ಗಾಳಿಯು ಧ್ವನಿಯನ್ನುತ್ಪತ್ತಿಮಾಡುವ ಅಂಗದಮೂಲಕ ಹೋಗಿ ಬರುವುದರಿಂದ ಶಬ್ದೋತ್ಪತ್ತಿಯಾಗುವುದು ; ಈ ಶಬ್ದವೇ ಅಳು.

ಹುಟ್ಟಿದ ಅರ್ಧಗಂಟೆಯೊಳಗಾಗಿ ಮಗು ಸೀನುವುದು, ಆಕಳಿಸುವುದು, ಕಣ್ಣೀರು ಸುರಿಸುವುದು, ತಾಯಿಯ ಸ್ತನವನ್ನು ಚೀಪಿ ಹಾಲುಣ್ಣುವುದು, ದೀಪವನ್ನು ಎವೆಯಿಕ್ಕದೆ ನೋಡುವುದು, ಹೆಬ್ಬೆರಳನ್ನು ಬಾಯಲ್ಲಿಡುವುದು, ದೊಡ್ಡ ಶಬ್ದವಾದರೆ ಬೆಚ್ಚಿಬೀಳುವುದು, ಬೆತ್ತವನ್ನು ಕೈಮುಷ್ಟಿಯಲ್ಲಿ ಹಿಡಿಯುವುದು ಈ ಕೆಲಸಗಳೆಲ್ಲವನ್ನೂ ಮಾಡಬಲ್ಲುದು.

ಆಗತಾನೆ ಹುಟ್ಟಿದ ಮಗು ಒಂದು ಸಣ್ಣ ದೀಪವನ್ನು ದೃಷ್ಟಿಸಿ ನೋಡುವುದು. ಮೂವತ್ತು ಗಂಟೆಗಳ ವಯಸ್ಸು ಕಳೆಯುವುದರೊಳಗಾಗಿ ದೀಪವನ್ನು ಗಮನವಿಟ್ಟು ನೋಡುವುದರಲ್ಲಿ ಮಗು ನಿಪುಣತೆಯನ್ನು ಪಡೆಯುವುದು. ದೀಪವನ್ನು ನೋಡಿದಾಗ ಕಣ್ಣಿನ ಚಲನೆಯೊಂದೇ ಅಲ್ಲದೆ ಇತರ ಅಂಗಗಳನ್ನೂ ಅಲುಗಾಡಿಸುವುದು. ಈಗ ಮತ್ತು ಇನ್ನೂ ಸ್ವಲ್ಪಕಾಲದ ವರೆಗೆ ಪ್ರತ್ಯೇಕ ಅಂಗಗಳನ್ನು ಅಲುಗಿಸುವ ಶಕ್ತಿಯನ್ನು ಪಡೆದಿರುವುದಿಲ್ಲ. ಯಾವ ಇಂದ್ರಿಯಕ್ಕೆ ಪ್ರಚೋದನೆಯಾದರೂ ದೇಹದ ನಾನಾ ಅಂಗಗಳು ಚಲಿಸುವುವು. ಹುಟ್ಟಿದ ಮಾರನೆಯ ದಿನ ಬಾಯೊಳಗೆ ಸ್ವಲ್ಪ ಉಪ್ಪುನೀರನ್ನು ಹಾಕಿದರೆ ಅದಕ್ಕೆ ಸ್ಪಷ್ಟವಾದ ಪ್ರತಿಕ್ರಿಯೆಯನ್ನು ತೋರಿಸುವುದು-ಚಪ್ಪರಿಸುವುದು ; ಮುಖವನ್ನು ಗಂಟುಹಾಕಿಕೊಳ್ಳುವುದು ; ತಲೆ, ದೇಹ, ಕೈಕಾಲುಗಳನ್ನು ಆಡಿಸುವುದು ಯಾವ ರುಚಿಯೂ ಇಲ್ಲದಿರುವ ಶುದ್ಧವಾದ ನೀರನ್ನು ಬಾಯೊಳಗೆ ಹಾಕಿದರೆ, ಆಗ ಅಂಗಗಳ ಚಲನೆಯು ಉಪ್ಪುನೀರು ಹಾಕಿದಾಗ ಇರುವಷ್ಟು ಇರುವುದಿಲ್ಲ. ರುಚಿಯನ್ನು ಗ್ರಹಿಸಬಲ್ಲ ಇಂದ್ರಿಯಗಳು ಹುಟ್ಟಿದ ಮೊದಲ ದಿನದಿಂದಲೇ ಕೆಲಸಮಾಡತೊಡಗುವುವು. ಒಂದು ವಾರದಲ್ಲಿ ಈ ಶಕ್ತಿಯು ಬಹುಮಟ್ಟಿಗೆ ಮುಂದುವರಿಯುವುದು. ಮೊದಲನೆಯ ದಿನ ಯಾವ ವಿಧವಾದ ವಾಸನೆಯನ್ನೂ ಗ್ರಹಿಸಬಲ್ಲ ಸೂಚನೆಯನ್ನು ತೋರಿ

ಸುವುದಿಲ್ಲ. ವಾಸನೆಯ ವಸ್ತುಗಳನ್ನು ಮೂಗಿನ ಹತ್ತಿರವಿಟ್ಟರೆ ಮಗು ಅದಕ್ಕೆ ಒಂದು ನಿರ್ದಿಷ್ಟವಾದ ಪ್ರತಿಕ್ರಿಯೆಯನ್ನು ತೋರಿಸುವುದಿಲ್ಲ. ಬೆಳೆದಮೇಲೆ ಈ ಇಂದ್ರಿಯವು ಕೆಲಸಮಾಡಲಾರಂಭಿಸುವುದು. ಹುಟ್ಟಿದ ಮಗುವಿನಲ್ಲಿ ಶೀತೋಷ್ಣಗ್ರಹಣಶಕ್ತಿಯು ಸ್ವಲ್ಪ ಮಟ್ಟಿಗೆ ಇರುವುದು. ದೇಹದ ಉಷ್ಣಕ್ಕಿಂತ ಸ್ವಲ್ಪ ಹೆಚ್ಚಾದ ಇಲ್ಲವೆ, ಕಡಮೆಯಾದ ಉಷ್ಣಕ್ಕೆ ದೇಹವನ್ನು ಅಲುಗಾಡಿಸಿ ಪ್ರತಿಕ್ರಿಯೆಯನ್ನು ತೋರಿಸುವುದು ಒಂದು ಸಣ್ಣ ಸೂಜಿಯಿಂದ ಮಗುವಿನ ಮುಖವನ್ನು ಚುಚ್ಚಿದರೆ ಕೈಕಾಲುಗಳನ್ನು ಆಡಿಸಿ ಪ್ರತಿಕ್ರಿಯೆಯನ್ನು ತೋರಿಸುವುದು. ಆದರೆ ಬೇರೆ ಅಂಗಗಳನ್ನು ಚುಚ್ಚಿದರೆ ಯಾವ ಪ್ರತಿಕ್ರಿಯೆಯನ್ನೂ ತೋರಿಸದೆ ಸುಮ್ಮನಿರುವುದು. ನೋವನ್ನು ಗ್ರಹಿಸುವ ಶಕ್ತಿಯು ಕ್ರಮವಾಗಿ ಬೆಳೆದು ಒಂದು ವಾರದಲ್ಲಿ ಹೆಚ್ಚುವುದು. ಆದರೆ ಸ್ಪರ್ಶಶಕ್ತಿಯು ಮಾತ್ರ ದೇಹದ ಯಾವ ಭಾಗವನ್ನು ಮುಟ್ಟಿದರೂ ಕಾಣಿಸಿಕೊಳ್ಳುವುದು.

ಹುಟ್ಟಿದ ದಿನ ಮತ್ತು ಮೊದಲನೆಯ ವಾರದಲ್ಲಿ ಮಗು ಸಾಧಾರಣವಾಗಿ ದಿನಕ್ಕೆ ಇಪ್ಪತ್ತು ಗಂಟೆಗಳ ಕಾಲ ನಿದ್ರಿಸುವುದು. ಸುಮಾರು ಮೂರು ಗಂಟೆಗಳಿಗೊಮ್ಮೆ ನಿದ್ರೆಯಿಂದ ಎದ್ದು ಹಾಲು ಕುಡಿದು ಮತ್ತೆ ಮಲಗುವುದು. (ಈ ಕಾರಣದಿಂದಲೇ ಮಗುವಿಗೆ ಮೂರು ಗಂಟೆಗಳಿಗೊಂದು ಸಲ ಹಾಲು ಕುಡಿಸಬೇಕು. ) ಎದ್ದಿರುವಾಗ ಕೈಕಾಲುಗಳನ್ನು ಆಡಿಸುವುದು, ತುಟಿಯನ್ನು ಅಲುಗಿಸುತ್ತಿರುವುದು. ನಿದ್ದೆಮಾಡುತ್ತಿರುವಾಗ ಏನಾದರೂ ಅಸ್ವಸ್ಥತೆಯುಂಟಾದರೆ ನಿಯಮಿತಕಾಲಕ್ಕಿಂತ ಮುಂಚೆಯೇ ಎಚ್ಚರಗೊಳ್ಳುವುದು. ಈ ಅಸ್ವಸ್ಥತೆಯು, ಹಾಸಿಗೆಯು ಉಚ್ಚೆಯಿಂದ ತಣ್ಣಗಾಗುವುದರಿಂದಲೋ, ಹಾಸಿಗೆಯು ಮಡಿಸಿಕೊಂಡು ಮಡಿಕೆಯು ಒತ್ತಿ ನೋವುಂಟುಮಾಡುವುದರಿಂದಲೋ ಅಥವಾ ಹಸಿವಿನಿಂದಲೋ ಉಂಟಾಗಬಹುದು.

ಹುಟ್ಟಿದ ದಿವಸದಿಂದಲೂ ಮೊದಲ ಎರಡು ಮೂರು ತಿಂಗಳ ವರೆಗೂ, ತಾಯಿಯ ಗರ್ಭದೊಳಗೆ ಮಗು ಯಾವ ಸ್ಥಿತಿಯಲ್ಲಿರುತ್ತಿತ್ತೋ ಅದೇ ಸ್ಥಿತಿಯಲ್ಲಿ ಅಂದರೆ ಬೆನ್ನಿನ ಮೇಲೆ ಮಲಗಿರುವಾಗ ತಲೆಯನ್ನು ಒಂದು ಕಡೆಗೆ ಬಾಗಿಸಿ ಅತ್ತಕಡೆಯ ಕೈಯನ್ನು ನೆಟ್ಟಗೆ ನೀಡಿ, ಇನ್ನೊಂದು ಕೈಯನ್ನು ಮಡಿಸಿ ಎದೆಯಮೇಲೆಯೋ, ತಲೆಯ ಮೇಲೆಯೋ ಇಟ್ಟುಕೊಂಡಿರುವುದು. ಸುಮಾರು ನಾಲ್ಕುತಿಂಗಳು ಕಳೆದನಂತರ ಎಚ್ಚರದಿಂದಿರುವಾಗ ತಲೆಯನ್ನು ನೆಟ್ಟಗಿಟ್ಟು ಎರಡು ಕೈಗಳನ್ನೂ ಚಾಚಬಲ್ಲುದು.

**ಒಂದು ತಿಂಗಳ ಮಗು :—** ನಾಲ್ಕು ವಾರಗಳ ವಯಸ್ಸಿಗೆ ಬರುವ ವೇಳೆಗೆ ಮಗು ತನ್ನ ಅಂಗಾಂಗಗಳ ಮೇಲಿನ ಹತೋಟಿಯನ್ನು ಹೆಚ್ಚಿಸಿಕೊಳ್ಳುವುದು. ಈಗ ಮಗು ಬೆನ್ನಿನ ಮೇಲೆ ಮಲಗಿ ಎಚ್ಚರವಾಗಿರುವಾಗ ತಲೆಯನ್ನು ಒಂದು ಪಕ್ಕಕ್ಕೆ ತಿರುಗಿಸುವುದು. ಭುಜದ ಮೇಲೆ ಒರಗಿಸಿಕೊಂಡರೆ ಒಮ್ಮೊಮ್ಮೆ ತಲೆಯನ್ನೆತ್ತುವುದು ; ಬೋರಲಾಗಿ ಮಲಗಿಸಿದರೆ ಕೈಕಾಲುಗಳನ್ನು ಆಡಿಸುವುದು ; ತಲೆಯನ್ನೆತ್ತಲು ಪ್ರಯತ್ನಿಸುವುದು ; ತುಟಿಯನ್ನು ಮುಟ್ಟಿದರೆ ಬಾಯನ್ನು ಮುಚ್ಚಿಕೊಳ್ಳುವುದು ; ಬಾಗಿಲು ಬೀರು ಮುಂತಾದ ದೊಡ್ಡ ಪದಾರ್ಥಗಳನ್ನು ದೃಷ್ಟಿಸಿ ನೋಡುವುದು, ಬಣ್ಣದ ಬಳೆಯನ್ನು ಕೈಯಲ್ಲಿ ಹಿಡಿಯುವುದು. ಶಬ್ದಮಾಡಿದರೆ ಗಮನಿಸುವುದು, ಕೈಕಾಲುಗಳನ್ನು ಆಡಿಸುತ್ತಿರುವ ಸಮಯದಲ್ಲಿ ಒಂದು ಸಣ್ಣ ಗಂಟೆಯನ್ನು ಬಾರಿಸಿದರೆ ಶಬ್ದವನ್ನು ಕೇಳಿ ಕೈಕಾಲುಗಳನ್ನಾಡಿಸುವುದನ್ನು ನಿಲ್ಲಿಸುವುದು. ಮಗು ಅಳುವ ಶಬ್ದವೊಂದನ್ನು ಹೊರತು ಬೇರೆ ಯಾವ ಶಬ್ದವನ್ನೂ ಮಾಡಲಾರದು. ಆದರೆ ಅಳುವಿನಲ್ಲಿ ನೋವು ಅಸ್ವಸ್ಥತೆ ಹಸಿವುಗಳುಂಟಾದಾಗ ಬೇರೆ ಬೇರೆ ವಿಧವಾದ ಧ್ವನಿಗಳು ಕೆಲವು ವೇಳೆ ಕಂಡುಬರುವುದುಂಟು. ಮಗು

ವಿನ ಮುಖದ ಹತ್ತಿರ ದೊಡ್ಡವರು ತಮ್ಮ ಮುಖವನ್ನಿಟ್ಟರೆ ಕ್ಷಣ ಕಾಲ ಮಗು ದೊಡ್ಡವರ ಮುಖವನ್ನು ನೋಡುವುದು; ಎಳ್ಳಷ್ಟು ಮುಗುಳ್ನಗೆ ನಗುವುದು. ಈ ವಯಸ್ಸಿನಲ್ಲಿ ಮಗು ಮುಖ್ಯವಾಗಿ ತನ್ನ ಕಣ್ಣು ಮತ್ತು ಕತ್ತು ಈ ಅವಯವಗಳ ಮಾಂಸಖಂಡಗಳ ಮೇಲೆ ಹತೋಟಿಯನ್ನು ಪಡೆದಿರುವುದು. ಆದರೆ ಕತ್ತಿನ ಕೆಳಗಿನ ಅವಯವಗಳ ಮೇಲೆ ಇನ್ನೂ ಅಷ್ಟೊಂದು ಹತೋಟಿಯಿರುವುದಿಲ್ಲ.

**ನಾಲ್ಕು ತಿಂಗಳಲ್ಲಿ:**—ಹದಿನಾರು ವಾರಗಳು ಅಂದರೆ ಸುಮಾರು ನಾಲ್ಕು ತಿಂಗಳು ಕಳೆದರೆ, ಮಗು ತಲೆಯನ್ನು ಚೆನ್ನಾಗಿ ಆಡಿಸುವುದು. ಎದುರಿಗೆ ಮರದ ಬಳೆಯೊಂದನ್ನು ಹಿಡಿದು ಆಡಿಸಿದರೆ, ಅದನ್ನು ಹಿಡಿಯಲು ತಲೆ ಭುಜ ತೋಳುಗಳನ್ನು ಆಡಿಸುವುದು. ಅಂದರೆ ಈಗ ಮಗು ಸೊಂಟದ ಮೇಲ್ಭಾಗ ಮತ್ತು ಭುಜ ತೋಳುಗಳ ಮಾಂಸಖಂಡಗಳ ಮೇಲಿನ ಹತೋಟಿಯನ್ನು ಪಡೆದಿರುವುದು. ಆದರೆ ಕಾಲುಗಳ ಮೇಲೆ ಇನ್ನೂ ಹತೋಟಿ ಬಂದಿರುವುದಿಲ್ಲ. ಎತ್ತಿ ನಿಲ್ಲಿಸಿದಾಗ ಮಾತ್ರ ಕ್ಷಣಕಾಲ ಕಾಲನ್ನು ನೆಟ್ಟಗೆ ಮಾಡುವುದು. ಸೊಂಟದ ಮೇಲಿನ ಮಾಂಸಖಂಡಗಳ ಮೇಲೆ ಹತೋಟಿಯಿರುವುದರಿಂದ ದಿಂಬಿನ ಪಕ್ಕದಲ್ಲಿ ಕೂಡಿಸಿದರೆ ಮಗು ಸಂತೋಷವನ್ನು ಸೂಚಿಸುವುದು. ಕೈಯಲ್ಲಿ ಆಟಿಗೆಯನ್ನು ಕೊಟ್ಟರೆ ಕೈಯನ್ನೂ ಆಟಿಗೆಯನ್ನೂ ನೋಡುವುದು. ಆಟಿಗೆಯು ನೆಲದಮೇಲಿದ್ದಾಗ ನೋಡಿದರೆ, ನೋಡಿದುದನ್ನು ಹಿಡಿಯಲೆತ್ನಿಸುವುದು. ಅಳುವ ಸದ್ದೊಂದನ್ನು ಮಾತ್ರ ಮಾಡುತ್ತಿದ್ದ ಮಗು ಈಗ ‘ ಕೂ ’ ಎನ್ನುವ ಸದ್ದನ್ನೂ ಮಾಡುವುದು. ಗಂಟಲಿನಲ್ಲಿಯೇ ‘ ಗರ್‌ಗರ್ ’ ಎಂದು ಶಬ್ದಮಾಡುವುದು ; ಮತ್ತು ನಕ್ಕು ಶಬ್ದಮಾಡುವುದೂ ಉಂಟು. ಈ ಶಬ್ದಗಳೇ ಮುಂದೆ ಭಾಷೆಯಾಗಿ ಪರಿಣಮಿಸುವುವು. ಕೇಳಿ ರೂಢಿಯಾದ ಶಬ್ದಕ್ಕೆ ಕಿವಿಗೊಡುವುದು. ತಾಯಿಯು ಆಡುವ

ಮುದ್ದಿನ ಮಾತುಗಳನ್ನು ಗುರುತಿಸುವುದು. ಇತರ ಶಬ್ದಗಳಿಗಿಂತ ಮನುಷ್ಯರು ಮಾಡುವ ಶಬ್ದಕ್ಕೆ ಹೆಚ್ಚು ಗಮನ ಕೊಡುವುದು. †

ತಾಯಿಯ ಮುಖ ಕೈ ಧ್ವನಿಗಳನ್ನು ಗುರುತಿಸಬಲ್ಲುದು. ತಾಯಿ ಮತ್ತು ಇತರರು ವೇಳೆಗೆ ಸರಿಯಾಗಿ ಮಗುವಿಗೆ ಆಹಾರವನ್ನು ಕೊಟ್ಟು, ಸ್ನಾನಮಾಡಿಸಿ, ಉಡುಪು ಹಾಕಿ, ಆಗಿಂದಾಗ್ಗೆ ಎತ್ತಿ ಮುದ್ದಾಡಿ ಮಾತನಾಡಿಸಿ ಪ್ರೇಮವನ್ನು ಸೂಚಿಸುವುದರಿಂದ ಮಗು ಅವರನ್ನು ಗುರುತಿಸಿ, ಅವರ ಮುಖವನ್ನು ಕಂಡರೆ ಅಥವಾ ಅವರ ಧ್ವನಿಯನ್ನು ಕೇಳಿದರೆ ಮುಗುಳ್ನಗೆ ನಗುವುದು, ಕೈಕಾಲು ಚಾಚುವುದು. ಆದರೆ ಹೊಸಬರು ಬಂದರೆ ತೆಪ್ಪಗಿರುವುದು.

ಮಗುವಿಗೆ ಈಗ ಕುಳಿತುಕೊಳ್ಳಬೇಕೆಂದರೆ ಬಹು ಇಷ್ಟ. ಮಲಗಿರುವ ಮಗುವನ್ನು ತೊಡೆಯಮೇಲೆ ಕೂಡಿಸಿಕೊಂಡರೆ ಕಣ್ಣನ್ನು ಚೆನ್ನಾಗಿ ತೆರೆದು ಶ್ವಾಸವನ್ನು ವೇಗವಾಗಿ ತೆಗೆಯುತ್ತಾ ಮುಗುಳ್ನಗೆ ನಗುವುದು, ಕೈಕಾಲುಗಳನ್ನು ಜೋರಾಗಿ ಆಡಿಸಿ ತನ್ನ ಸಂತೋಷವನ್ನು ಸೂಚಿಸುವುದು. ತಲೆಯು ಈಗ ಚೆನ್ನಾಗಿ ನಿಲ್ಲುವುದು. ತನ್ನ ಸುತ್ತಲ ಆವರಣವನ್ನು ಈ ಎತ್ತರದ ಸ್ಥಾನದಿಂದ ಇನ್ನೂ ಹೆಚ್ಚಾಗಿ ಚೆನ್ನಾಗಿ ನೋಡಬಲ್ಲುದು. ಮಲಗಿರುವಾಗ ಇಷ್ಟು ವಿಶಾಲವಾದ ಆವರಣವು ಕಾಣಿಸದೆ, ಸುತ್ತಲಿರುವ ಸಾಮಾನುಗಳಾವುದನ್ನೂ ನೋಡಲಾರದೆ ಬರಿಯ ಮೇಲ್ಹಾವಣಿಯನ್ನು ಮಾತ್ರ ನೋಡಬಲ್ಲುದಾಗಿತ್ತು. ಆದುದರಿಂದಲೇ ಮಗುವನ್ನು ಎತ್ತಿ ಕೂಡಿಸಿದರೆ ಅದರ ಪ್ರಪಂಚಜ್ಞಾನವು ಬಹಳ ವಿಶಾಲವಾಗುವುದು.

**ಇಪ್ಪತ್ತೆಂಟು ವಾರಗಳಲ್ಲಿ :—** ಈಗ ಮಗುವು ಸ್ವಲ್ಪ ಸಹಾಯದಿಂದ ಚೆನ್ನಾಗಿ ಕುಳಿತುಕೊಳ್ಳುವುದು. ಸ್ವಲ್ಪ ಹೊತ್ತಿನ ವರೆಗೆ ಯಾವ ಸಹಾಯವೂ ಇಲ್ಲದೆಯೂ ಕುಳಿತುಕೊಳ್ಳಬಲ್ಲದು. ಇದು

† ಮೊದಲನೆಯ ಚಿತ್ರವನ್ನು ನೋಡಿ.

ವರೆವಿಗೂ ಸಾಮಾನುಗಳನ್ನು ನೋಡಿದರೆ ಎರಡು ಕೈಗಳನ್ನೂ ಚಾಚುತ್ತಿದ್ದ ಮಗು ಈಗ ಒಂದು ಕೈಯಲ್ಲಿ ಆಟಿಗೆಯನ್ನು ಹಿಡಿಯ ಬಲ್ಲುದು. ಹಿಡಿಯುವುದಕ್ಕೆ ಹೆಬ್ಬೆರಳನ್ನು ಉಪಯೋಗಿಸುವುದು. ಮರದ ತುಂಡನ್ನು ಒಂದು ಕೈಯಿಂದ ಮತ್ತೊಂದು ಕೈಗೆ ಬದಲಾ ಯಿಸುತ್ತಾ ಆಡಿಕೊಳ್ಳುವುದು. ಹದಿನಾರು ವಾರಗಳ ಮಗುವು ಸುತ್ತಲಿರುವ ಆವರಣವನ್ನು ನೋಡಬಲ್ಲುದು; ಆದರೆ ಇಪ್ಪತ್ತೆಂಟು ವಾರಗಳ ಮಗುವು ಆವರಣವನ್ನು ಮಾತ್ರವಲ್ಲದೆ ಆವರಣದಲ್ಲಿಯ ವಸ್ತುಗಳನ್ನೂ ಸಹ ಗಮನವಿಟ್ಟು ನೋಡಬಲ್ಲುದು. ಈ ಬದಲಾ ವಣೆಯು ಮಗುವಿನ ಮಾನಸಿಕ ಬೆಳೆವಣಿಗೆಯಲ್ಲಿ ಸ್ಥೂಲಗಮನ ದಿಂದ ಸೂಕ್ಷ್ಮಗಮನಕ್ಕೆ ಪರಿವರ್ತನವನ್ನು ಸೂಚಿಸುವ ಒಂದು ಮುಖ್ಯ ಅಂತಸ್ತು. ಮೂರುತಿಂಗಳ ಮಗು ತನ್ನ ಕಣ್ಣುಗಳಿಂದ ಸಾಮಾನನ್ನು ನೋಡುತ್ತಿದ್ದು ಆರು ತಿಂಗಳ ವಯಸ್ಸಿಗೆ ಬಂದಾಗ ತಾನು ನೋಡಿದುದನ್ನು ಹಿಡಿಯಲೆತ್ನಿಸುವುದು. ಹಿಡಿದ ಆಟಿಗೆ ಯನ್ನು ಬಾಯಿಗಿಡುವುದು. ಆಟಿಗೆಯ ರೂಪಲಕ್ಷಣಗಳನ್ನು ನೋಟ ದಿಂದಲೂ, ಕೈಯಿಂದ ಮುಟ್ಟುವುದರಿಂದಲೂ, ಬಾಯಲ್ಲಿಟ್ಟು ಚೀಪು ವುದರಿಂದಲೂ ಪರೀಕ್ಷಿಸುವುದು, ಆಟಿಗೆಯನ್ನು ಕೈಯಲ್ಲಿ ತಿರುಗಿಸಿ ತಿರುಗಿಸಿ ಬಾಯಲ್ಲಿಡುವುದು. ಈ ವಿಧವಾಗಿ ಮಗುವು ತನ್ನ ಕಣ್ಣು, ಕೈ ಬಾಯಿಗಳ ಸಮನ್ವಯ ಚಲನದಿಂದ ಆಟವನ್ನು ಮುಂದುವರಿಸಿ ಆವರಣದ ಜ್ಞಾನವನ್ನು ಹೆಚ್ಚಿಸಿಕೊಳ್ಳುವುದು.

ಈ ವಯಸ್ಸಿನಲ್ಲಿ ಮಗುವು ಬಹಳವಾಗಿ ಶಬ್ದಮಾಡುವುದು. ನಾನಾವಿಧವಾದ ಸ್ವರ ವ್ಯಂಜನಗಳಿಂದ ಕೂಡಿದ ಶಬ್ದಗಳನ್ನು ಸ್ವೇಚ್ಛೆ ಯಾಗಿ ಮಾಡುತ್ತಿರುವುದು. ಕೆಲವು ಸಮಯಗಳಲ್ಲಿ 'ಮೂ' 'ಮಾ' 'ಡಾ' ಎಂಬ ಶಬ್ದಗಳನ್ನು ಜೊತೆಜೊತೆಯಾಗಿ ಉಚ್ಚರಿಸುವುದು. ಇದೇ ಮಗುವಿನ ಮೊದಲಮಾತಿಗೆ ತಳಹದಿ.

ಇತರರು ತನ್ನೊಡನೆ ಮಾತನಾಡಿದರೆ, ಅವರಾಡುವ ಶಬ್ದ ಗಳನ್ನು ಗುರುತಿಸುವುದು, ಮಾತುಗಳ ಅರ್ಥವು ಗೊತ್ತಿಲ್ಲದೆ ಹೋ ದರೂ ಧ್ವನಿಯಿಂದಲೇ ಆಡಿದ ಮಾತಿನ ಅರ್ಥವನ್ನು ಗ್ರಹಿಸಲಾರಂಭಿ ಸುವುದು. ಹೀಗೆ ಇತರರೊಡನೆ ಶಬ್ದಗಳ ಮೂಲಕ ಸಂಪರ್ಕವನ್ನು ಬೆಳೆಸಲಾರಂಭಿಸುವುದು.

ಮೇಲೆ ಹೇಳಿರುವಂತೆ, ಈ ವಯಸ್ಸಿನ ಮಗುವು ಎಚ್ಚರದಿಂದಿ ರುವಾಗ ಕೈಗೆ ಗಿಲಕಿ, ಉರುಟುಗೋಲು, ಮರದ ಚೆಂಡು ಮುಂತಾದ ಆಟದ ಸಾಮಾನುಗಳನ್ನು ಕೊಟ್ಟರೆ, ತನಷ್ಟಕ್ಕೆ ತಾನು ಆಡಿಕೊಂಡು ತನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಾ ಸಂತೋಷದಿಂದಿರುವುದು. ಆದರೆ ಹೀಗೆ ಮಗುವನ್ನು ಆಡಿಕೊಳ್ಳಲು ಬಿಡದೆ ಅದು ಎಚ್ಚರವಾಗಿ ರುವಾಗಲೆಲ್ಲಾ ಎತ್ತಿ ಮುದ್ದಾಡಿ, ಕಂಕುಳಲ್ಲಿ ಎತ್ತಿಕೊಂಡು ದಣಿಸಿ, ತಮ್ಮ ಸಂತೋಷವನ್ನು–ಅದೂ ತಾತ್ಕಾಲಿಕವಾಗಿ–ಹೆಚ್ಚಿಸಿಕೊಳ್ಳಲು ಮಗುವಿನ ಬೆಳವಣಿಗೆಗೆ ತಾಯಿಯರು ಅಡಚಣೆಯನ್ನುಂಟುಮಾಡು ವರು. ಪದೇ ಪದೇ ಮಗುವನ್ನು ಎತ್ತಿ ಮುದ್ದಾಡುತ್ತಿದ್ದರೆ, ದುರ ಭ್ಯಾಸವುಂಟಾಗಿ, ತನ್ನನ್ನು ಎತ್ತಿಕೊಳ್ಳದೆ ಹೋದರೆ ಮಗು ಅತ್ತು ಚಂಡಿಹಿಡಿಯುವುದು. ಮಗುವು ಹೀಗೆ ಚಂಡಿಹಿಡಿಯಲು ತಳ ಹದಿಯನ್ನು ತಾಯಂದಿರೇ ನಾಲ್ಕಾರು ತಿಂಗಳ ವಯಸ್ಸು ತುಂಬು ವುದರೊಳಗಾಗಿ ಹಾಕಿ ತಮಗೂ, ಮಕ್ಕಳಿಗೂ ತೊಂದರೆಯನ್ನು ತಂದುಕೊಳ್ಳುವರು. ಅದರಲ್ಲಿಯೂ ಮನೆಯಲ್ಲಿರುವ ಅಜ್ಜಿಯರು ಚಾಪೆಯಮೇಲೆ ತನ್ನಷ್ಟಕ್ಕೆ ತಾನು ಆಟವಾಡಿಕೊಳ್ಳುತ್ತಿರುವ ಮಗು ವನ್ನು ಕಂಡೊಡನೆಯೇ ಎತ್ತಿ ಮುದ್ದಾಡಿ ಅದಕ್ಕೆ ದುರಭ್ಯಾಸವನ್ನು ಕಲಿಸಿಕೊಟ್ಟು ಮಗುವಿಗೆ ತೊಂದರೆಯನ್ನುಂಟುಮಾಡುವರು. ಆದುದ ರಿಂದಲೇ ಹದಗೆಟ್ಟ ಮಕ್ಕಳನ್ನು ‘ ಅಜ್ಜಿ ಸಾಕಿದ ಮಗು ’ ಎಂದು ಹೇಳುವ ನಾಣ್ಣುಡಿಯಿರುವುದು.

**ಒಂಬತ್ತು ತಿಂಗಳ ಮಗು** :—ಮೊದಲ ಮೂರು ತಿಂಗಳು ಗಳಲ್ಲಿ ಯಾವಾಗಲೂ ಒಂದು ಕಡೆ ಮಲಗಿರುತ್ತಿದ್ದ ಮಗು ಈಗ ಎಚ್ಚರದಿಂದಿರುವ ಸಮಯದಲ್ಲಿ ಎದ್ದು ಕುಳಿತಿರಬೇಕೆಂದು ಬಯಸು ವುದು ಮಲಗಿಸಿದರೆ ಹೊರಲಾಡಿ ಮೇಲಕ್ಕೆದ್ದು ಕುಳಿತುಕೊಳ್ಳಲು ಇಚ್ಛಿಸುವುದು.

ಮಗು ತನ್ನ ಶರೀರದ ಮಾಂಸಖಂಡಗಳ ಮೇಲೆ ಹತೋಟಿ ಯನ್ನು ಪಡೆಯುವುದರಲ್ಲಿ ಒಂದು ಕ್ರಮವಿರುವುದು. ಮೊದಲ ಮೂರು ತಿಂಗಳಲ್ಲಿ ಕಣ್ಣು ಬಾಯಿಗಳನ್ನು ತನ್ನ ವಶಕ್ಕೆ ತುಂದುಕೊಳ್ಳುವುದು. ಎರಡನೆಯ ಮೂರು ತಿಂಗಳಲ್ಲಿ ತಲೆ, ಕತ್ತು ಭುಜಗಳ ಮೇಲೆ ಹತೋಟಿಯನ್ನು ಪಡೆಯುವುದು. ಮೂರನೆಯ ಮೂರು ತಿಂಗಳಲ್ಲಿ ಅಂದರೆ ಆರು ತಿಂಗಳು ವಯಸ್ಸಿನಿಂದ ಒಂಬತ್ತು ತಿಂಗಳು ವಯಸ್ಸಿನ ವರೆಗೆ ಸೊಂಟ ಮತ್ತು ಕೈಗಳನ್ನುತನ್ನ ವಶಕ್ಕೆ ತಂದುಕೊಳ್ಳುವುದು. † ಒಂಬತ್ತು ತಿಂಗಳಿನಿಂದಒಂದು ವರ್ಷದೊಳಗೆ ಕಾಲು ಮತ್ತು ಬೆರಳುಗಳ ಮೇಲೆ ಹತೋಟಿಯನ್ನು ಹೊಂದುವುದು. ಈಗ ಮಗು ಸ್ವಲ್ಪಮಟ್ಟಿಗೆ ನಿಂತುಕೊಳ್ಳಲುಪ್ರಯತ್ನಿಸುವುದು ಆದರೆ ಸೊಂಟದ ಮೇಲೆ ಹತೋಟಿ ಹೆಚ್ಚಿ ಯಾವ ಸಹಾಯವೂ ಇಲ್ಲದೆ ಕುಳಿತುಕೊಳ್ಳು ವುದು ; ಕುಳಿತು ಒಂದುಕಡೆಯಿಂದ ಮತ್ತೊಂದುಕಡೆಗೆ ತಿರುಗುವುದು, ಬಗ್ಗುವುದು, ಕುಳಿತಸ್ಥಳದಿಂದ ಬೋರಲು ಮಲಗುವುದು; ಬೋರಲು ಮಲಗಿದ್ದರೆ ಎದ್ದು ಕುಳಿತುಕೊಳ್ಳುವುದು. ಕೈಬೆರಳುಗಳ ಚಟುವಟಿ ಕೆಯು ಹೆಚ್ಚಾಗುವುದು. ಪದಾರ್ಥಗಳನ್ನು ಹಿಡಿಯುವಾಗ ಹೆಬ್ಬೆಟ್ಟು ಸಹಕಾರಿಯಾಗುವುದು.

ತುಟಿಯ ಮಾಂಸಖಂಡಗಳು ಹತೋಟಿಗೆ ಬಂದು ಹಾಲಿನ ಲೋಟವನ್ನು ಸರಿಯಾಗಿ ಬಾಯಲ್ಲಿಟ್ಟು ಹಾಲನ್ನು ಕುಡಿಯಬಲ್ಲುದು,

---

† ಮೊದಲನೆಯ ಚಿತ್ರವನ್ನು ನೋಡಿ.

ತಿನ್ನುವಾಗ ಮತ್ತು ಉಗುಳುವಾಗ ನಾಲಗೆಯನ್ನು ಉಪಯೋಗಿಸುವುದು. ಈಗಲೂ, ಕೈಯಲ್ಲಿ ಹಿಡಿದಿರುವ ವಸ್ತುವನ್ನು ಬಾಯಿಗೆ ತೆಗೆದುಕೊಂಡು ಹೋಗುವುದು ; ಆದರೆ ಈ ಇಚ್ಛೆಯು ಬಹಳ ಕಡಮೆಯಾಗಿಹೋಗಿರುವುದು. ಪದಾರ್ಥಗಳನ್ನು ಕಣ್ಣು ಮತ್ತು ಕೈಗಳಿಂದಲೇ ಪರೀಕ್ಷಿಸಲಾರಂಭಿಸುವುದು. ಸ್ವಲ್ಪಮಟ್ಟಿಗೆ, ಮೇಲೆ-ಕೆಳಗೆ, ಒಳಗೆ-ಹೊರಗೆ, ಈ ಕಡೆ- ಆ ಕಡೆ, ಒಂದು-ಒಂದಕ್ಕಿಂತ ಹೆಚ್ಚು ಎಂಬ ಸಂಬಂಧಗಳ ಅರಿವು ಉಂಟಾಗಿರುವುದು. ಬುದ್ಧಿ ಶಕ್ತಿಯು ಬೆಳೆಯುತ್ತ ಬೆಳೆಯುತ್ತ ಈ ಸಂಬಂಧಗಳ ಜ್ಞಾನವು ಮುಂದುವರಿಯುವುದು.

ನಾಲಗೆ, ತುಟಿ ಮತ್ತು ದವಡೆಗಳ ಮೇಲಿನ ಹತೋಟಿ ಹೆಚ್ಚಿ ಅಗೆಯುವ ಕೆಲಸವು ಪ್ರಾರಂಭವಾಗಿ ಶಬ್ದೋಚ್ಚಾರಣೆಯು ಮುಂದುವರಿಯುವುದು. ಈ ವಯಸ್ಸಿನಲ್ಲಿ ನಾನಾ ಶಬ್ದಗಳನ್ನು ಮಗುವು ಮಾಡಬಲ್ಲದು. " ತ್ರುವ್ವಿ " ಎಂದು ಸದ್ದುಮಾಡುವುದು. ಹೆಸರನ್ನು ಹಿಡಿದು ಕೂಗಿದರೆ ತಿರುಗಿನೋಡುವುದು. ' ಈ ಕೆಲಸವನ್ನು ಮಾಡಬೇಡ ' ಎಂದರೆ ಮಾತಿನ ಅರ್ಥವನ್ನು ಗ್ರಹಿಸುವುದು. ಒಂದೆರಡು ಪದಗಳನ್ನು ಉಪಯೋಗಿಸಿ ಮಾತನಾಡುವುದು.

ಒಂಬತ್ತು ತಿಂಗಳ ಮಗುವಿನ ದಿನಚರಿಯು ಒಂದು ಕ್ರಮಕ್ಕೆ ಬಂದಿರುವುದು. ಸಾಧಾರಣವಾಗಿ ರಾತ್ರಿಯಲ್ಲಿ ಎಚ್ಚರಗೊಳ್ಳದೆ ನಿದ್ದೆ ಮಾಡುವುದು. ದಿನಕ್ಕೆ ಮೂರುನಾಲ್ಕು ವೇಳೆ ಹಾಲುಕುಡಿಯುವುದು. ಬಿಸ್ಕತ್ತು ಮುಂತಾದ ಮೃದುವಾದ ಆಹಾರ ಪದಾರ್ಥಗಳನ್ನು ತಿನ್ನಲಾರಂಭಿಸುವುದು. ಹೊಸಬರನ್ನು ಕಂಡರೆ ಅವರು ' ಬೇರೆ ' ಎಂಬ ತಿಳಿವಳಿಕೆಯನ್ನು ಹೊಂದಿರುವುದು. ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಮುಗುಳ್ನಗೆ ನಗುವುದು.

**ಒಂದು ವರ್ಷದ ಮಗು :**—ಈಗ ಮಗುವಿಗೆ ಒಂದು ವರ್ಷ ತುಂಬಿತೆಂದು ಬಹಳ ಸಂಭ್ರಮದಿಂದ ಹುಟ್ಟಿದ ಹಬ್ಬವನ್ನು ಮಾಡುವರು. ಆದರೆ ಈ ವಯಸ್ಸಿನಲ್ಲಿ ಮಗುವು ಒಂದು ಪ್ರತ್ಯೇಕ ಅಂತಸ್ತನ್ನು ದಾಟುವುದಿಲ್ಲ. ಒಂಬತ್ತು ತಿಂಗಳ ವಯಸ್ಸಿನಲ್ಲಿ ಆರಂಭವಾದ ಸೊಂಟ ಮತ್ತು ಕಾಲುಗಳ ಮೇಲಿನ ಹತೋಟಿಯು ಹೆಚ್ಚುತ್ತಾ ಬಂದು ಹದಿನೈದು ತಿಂಗಳ ವಯಸ್ಸಿಗೆ ಪೂರ್ಣವಾಗುವುದು. ಆಗ ಮಗು ತಾನೇ ನಿಲ್ಲುವುದು. ಯಾರ ಸಹಾಯವೂ ಇಲ್ಲದೆ ನಡೆಯುವುದು. ಒಂದು ಗೋಲಿಯನ್ನು ಎತ್ತಿ ಪುಟ್ಟ ಬಟ್ಟಲೊಂದರೊಳಗೆ ಹಾಕುವ ಕೆಲಸವನ್ನು ಮಾಡಬಲ್ಲುದು. ಸೀಮೆಸುಣ್ಣವನ್ನು ಹಿಡಿದು ಗೀಚುವುದು. ನಾನಾವಿಧವಾದ ಶಬ್ದಗಳನ್ನು ಮಾಡಿ, ತನ್ನ ಅಭಿಪ್ರಾಯವನ್ನು ಹೊರಗೆಡವಲು ಯತ್ನಿಸುವುದು. ಆದರೆ ಒಂದು ವರ್ಷದ ಮಗುವು ಈ ಕೆಲಸಗಳನ್ನು ಮಾಡಲಾರದು.

ಹನ್ನೆರಡುತಿಂಗಳ ಮಗುವು ಅಂಬೆಗಾಲಿಟ್ಟು ಮನೆಯಲ್ಲೆಲ್ಲಾ ಓಡಾಡುವುದು, ಯಾವುದಾದರೂ ಸಾಮಾನನ್ನು ಹಿಡಿದು ನಿಲ್ಲಲು ಯತ್ನಿಸುವುದು. ಆದರೆ ಸರಿಯಾಗಿ ನಿಲ್ಲಬೇಕಾದರೆ ಇನ್ನೂ ಒಂದು ತಿಂಗಳು ಕಳೆಯಬೇಕು. ಸಾಮಾನುಗಳನ್ನು ಹಿಡಿಯುವುದರಲ್ಲಿ ಬಹಳ ಮಟ್ಟಿಗೆ ಕುಶಲತೆಯು ಮುಂದುವರಿದಿರುವುದು. ಹಿಡಿತವು ಬಿಗಿಯಾಗಿರುವುದು; ಅಲ್ಲದೆ ಬೇಕಾದಾಗ ಹಿಡಿದಿರುವ ಸಾಮಾನನ್ನು ಬಿಡುವ ಶಕ್ತಿಯೂ ಬಂದಿರುವುದು. ಒಂದು ಮರದ ತುಂಡನ್ನು ಕೈಯಲ್ಲಿ ಹಿಡಿದಿರುವಾಗ ಅದನ್ನು 'ಬಟ್ಟಲಿನಲ್ಲಿ ಹಾಕು' ಎಂದರೆ ಹಾಕಬಲ್ಲುದು. ನೋಡಿದುದನ್ನೂ, ಕೇಳಿದುದನ್ನೂ, ಅನುಕರಿಸುವ ಶಕ್ತಿಯು ಮುಂದುವರಿಯುವುದು. ಆಕಾರಗಳ ಜ್ಞಾನವು ಬಂದಿರುವುದು. ಚಕ್ರಾಕಾರವನ್ನು ಗುರುತಿಸಬಲ್ಲದು. ಮರದ ತುಂಡುಗಳನ್ನು

ಕೊಟ್ಟರೆ ಸಾಲಾಗಿ ಒಂದರ ಮಗ್ಗುಲಲ್ಲಿ ಮತ್ತೊಂದನ್ನಿಡುವುದು. ಇದೇ ಮುಂದೆ ಎಣಿಕೆಗೆ ತಳಹದಿಯಾಗುವುದು.

ಒಂದು ವರ್ಷದ ಮಗುವು ಇತರರು ಆಡುವ ಮಾತುಗಳನ್ನು ಗಮನವಿಟ್ಟು ಕೇಳುವುದು. ಬರಿಯ ಶಬ್ದವು ಈಗ ಮಾತಾಗಿ ರೂಪಾಂತರ ಹೊಂದುವುದು. ಕಿವಿಯಿಂದ ಕೇಳಿದ ಮಾತುಗಳನ್ನು ಪದೇ ಪದೇ ಹೇಳುತ್ತಿರುವುದು. ಒಂಬತ್ತು ತಿಂಗಳಲ್ಲಿ ಒಂದೆರಡು ಪದಗಳನ್ನು ಉಪಯೋಗಿಸುತ್ತಿದ್ದ ಮಗು ಈಗ ಮೂರು ನಾಲ್ಕು ಪದಗಳನ್ನು ಕಲಿತಿರುವುದು. ‘ ಬೇಡ ’ ಎಂಬುದರ ಅರ್ಥವನ್ನು ಮಾತ್ರ ತಿಳಿದಿದ್ದ ಮಗು ಈಗ ‘ ನನಗೆ ಕೊಡು ’ ಎಂದರೆ ಅದಕ್ಕೆ ತಕ್ಕಂತೆ ಕೆಲಸಮಾಡುವುದು. ಸಿಕ್ಕಾಬಟ್ಟೆ ಶಬ್ದಗಳನ್ನು ಮಾಡಿ ಇತರರ ಗಮನವನ್ನು ತನ್ನ ಕಡೆಗೆ ಸೆಳೆಯುವುದು ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಕೂಗಾಡಿ ಅದರೊಡನೆ ಸ್ನೇಹ ಬೆಳೆಸಲು ಯತ್ನಿಸುವುದು. ಈ ಕೂಗಾಟವೇ ಒಂದು ಕ್ರಮಕ್ಕೆ ಬಂದು ಮುಂದೆ ಭಾಷೆಯಾಗಿ ಪರಿಣಮಿಸುವುದು

ಈಗ ಮಗು ಮನೆಯಲ್ಲಿ ಒಂದು ಮುಖ್ಯವಾದ ವ್ಯಕ್ತಿಯಾಗುವುದು. ಎಲ್ಲರೂ ಕುಳಿತಿರುವಾಗ, ಶಬ್ದಗಳನ್ನು ಮಾಡಿದರೆ ಇತರರು ನಗುವರು ಎಂದರಿತು ಮಗು ಮತ್ತೆ ಮತ್ತೆ ಅದೇ ಶಬ್ದಗಳನ್ನು ಮಾಡಿ ನಗಿಸುವುದು. ಮತ್ತು ತಾನೂ ಸಂತೋಷಪಡುವುದು. ಹೀಗೆ ತನ್ನ ವ್ಯಕ್ತಿತ್ವದ ಅರಿವನ್ನು ಮುಂದುವರಿಸುವುದು. ಈಗ ಕೋಪ, ಭಯ, ಹೊಟ್ಟೆಕಿಚ್ಚು, ಸಹಾನುಭೂತಿ, ಆತುರತೆ, ಮುಂತಾದ ಭಾವನೆಗಳನ್ನು ಸ್ಪಷ್ಟವಾಗಿ ತೋರಿಸುವುದು. ಇತರರ ಭಾವನೆಗಳನ್ನು ಅರಿತು ಅವುಗಳಿಗೆ ಅನುಗುಣವಾಗಿ ವರ್ತಿಸಲಾರಂಭಿಸುವುದು. ಸಂಗೀತವನ್ನು ಕೇಳಿ ಸಂತೋಷವನ್ನು ಸೂಚಿಸುವುದು. ಪರಸ್ಪರ ಸಂಬಂಧವಿಲ್ಲದಿರುವುದನ್ನು ಕಂಡಾಗ ಆಶ್ಚರ್ಯವನ್ನು ಸೂಚಿಸಿ

ವಿನೋದಭಾವನೆಯಿಂದ ನಗುವುದು. ಅನುಕೂಲವಾಗ ನಾಲಗೆಯನ್ನು ಹೊರಗೆ ಚಾಚುವ ರಬ್ಬರು ಚೆಂಡನ್ನು ನೋಡಿ ಬಹಳ ಆನಂದ ಪಡುವುದು.

ಈ ವಯಸ್ಸಿನಲ್ಲಿ ಮಗು ಸ್ವಲ್ಪಮಟ್ಟಿಗೆ ತನ್ನ ಕೆಲಸಗಳನ್ನು ತಾನೇ ಮಾಡಬಲ್ಲುದು. ಹಾಲಿನ ಸೀಸೆಯನ್ನು ತಾನೇ ಕೈಯಲ್ಲಿ ಹಿಡಿದು ಹಾಲು ಕುಡಿಯುವುದು. ರೊಟ್ಟಿ ಬಿಸ್ಕತ್ತುಗಳನ್ನು ಹಿಡಿದು ತಿನ್ನುವುದು. ಸಾಧಾರಣವಾಗಿ ಮಲವಿಸರ್ಜನೆಯ ಮೇಲೆ ಹತೋಟಿಯನ್ನು ಪಡೆಯುವುದು. ಗೊತ್ತಾದ ಸ್ಥಳದಲ್ಲಿ ಗೊತ್ತಾದ ವೇಳೆಗೆ ಮಲವಿಸರ್ಜನೆಯನ್ನು ಮಾಡಲು ಕಲಿಯುವುದು. ತಾಯಿಯು ಉಡುಪನ್ನು ತೊಡಿಸುವಾಗ ಸಹಕರಿಸುವುದು; ತೋಳನ್ನು ನೀಡಿ, ತಲೆಯನ್ನು ಬಗ್ಗಿಸಿ ಬಟ್ಟೆಯನ್ನು ಹಾಕಿಸಿಕೊಳ್ಳುವುದು.

ಹೀಗೆ, ಹುಟ್ಟಿದಾಗ ದಿನವೆಲ್ಲವೂ ನಿದ್ರಿಸುತ್ತಿದ್ದ ಮಗು ಒಂದು ವರ್ಷ ವಯಸ್ಸು ತುಂಬುವುದರೊಳಗಾಗಿ ದಿನಕ್ಕೆ ಹತ್ತು ಹನ್ನೊಂದು ಗಂಟೆಗಳ ಕಾಲ ಎಚ್ಚರದಿಂದಿದ್ದು ಅನೇಕ ಚತುರತೆಗಳನ್ನು ಬೆಳಸಿಕೊಂಡು ತನ್ನ ಜ್ಞಾನವನ್ನೂ ವ್ಯಕ್ತಿತ್ವವನ್ನೂ ಅಭಿವೃದ್ಧಿಪಡಿಸಿಕೊಳ್ಳುವುದು.

# ಅಧ್ಯಾಯ ೩.

## ಎರಡು ಮತ್ತು ಮೂರನೆಯ ವರ್ಷಗಳು

**ಹದಿನೆಂಟು ತಿಂಗಳಲ್ಲಿ :—** ಒಂದುವರ್ಷದ ಮಗುವಿಗೂ ಒಂದೂವರೆ ವರ್ಷದ ಮಗುವಿಗೂ ಅನೇಕ ವ್ಯತ್ಯಾಸಗಳಿರುವುವು. ಈ ಆರು ತಿಂಗಳಲ್ಲಿ ಎತ್ತರದಲ್ಲಿ ಎರಡು ಮೂರು ಅಂಗುಲಗಳು ಹೆಚ್ಚಿರುವುದು. ತೂಕದಲ್ಲಿಯೂ ಎರಡು ಮೂರು ಪೌಂಡುಗಳಷ್ಟು ಹೆಚ್ಚುವುದು. ಒಂದೂವರೆ ವರ್ಷ ವಯಸ್ಸಿನಲ್ಲಿ ಹನ್ನೆರಡು ಹಲ್ಲುಗಳು ಹುಟ್ಟಿರುವುವು.

ಒಂದು ವರ್ಷದ ಮಗುವು ತಾಯಿಯನ್ನೋ ಯಾವುದಾದರೂ ಪೆಟ್ಟಿಗೆಯನ್ನೋ ಹಿಡಿದು ನಿಲ್ಲಬಲ್ಲುದಾಗಿತ್ತು. ಕ್ಷಣಕಾಲ ಮಾತ್ರ ಯಾವ ಸಹಾಯವೂ ಇಲ್ಲದೆ ನಿಲ್ಲುತ್ತಿತ್ತು. ಆದರೆ ಹದಿನೈದು ತಿಂಗಳ ವಯಸ್ಸಿನಲ್ಲಿ ಚೆನ್ನಾಗಿ ನಿಂತು ನಡೆಯುವ ಶಕ್ತಿಯನ್ನು ಪಡೆದಿರುವುದು. ಹದಿನೆಂಟು ತಿಂಗಳಲ್ಲಿ ಚೆನ್ನಾಗಿ ನಡೆಯುವುದನ್ನು ಕಲಿತಿರುವುದು. ಓಡಲು ಸಹ ಆರಂಭಿಸುವುದು. ಪುಟ್ಟ ಕುರ್ಚಿಯ ಮೇಲೆ ತಡವರಿಸದೆ ಕುಳಿತುಕೊಳ್ಳುವುದು. ದೊಡ್ಡ ಕುರ್ಚಿಯನ್ನು ಸಹ ಹತ್ತಿ ಕುಳಿತುಕೊಳ್ಳಬಲ್ಲುದು. ಮೆಟ್ಟಿಲನ್ನು ಹತ್ತುವುದಕ್ಕೆ ಸಹಾಯ ಬೇಕಾದರೂ ಇಳಿಯುವುದಕ್ಕೆ ಸಹಾಯವನ್ನು ಕೋರದೆ ತಾನೇ ಇಳಿಯುವುದು. ಆದರೆ ಇಳಿಯುವಾಗ ಕೈಕಾಲುಗಳೆಲ್ಲವನ್ನೂ ಉಪಯೋಗಿಸಿ ಇಳಿಯುವುದು. ನೆಲದಮೇಲೆ ಬಂದಾಗ ಮೊದಲಿನಂತೆ ಕೈಗಳನ್ನು ಉಪಯೋಗಿಸದೆ ಕಾಲುಗಳಿಂದಲೇ ನಿಂತು ಓಡಾಡುವುದು. ಈ ವಯಸ್ಸಿನಲ್ಲಿ ಕುರ್ಚಿಯನ್ನು ತಳ್ಳಿ ಗಾಡಿ ಓಡಿಸುವ

ಆಟವನ್ನಾಡುವುದು. ಮೂರು ಚಕ್ರದ ಗಾಡಿಯನ್ನು ಆನಂದದಿಂದ ತಳ್ಳುತ್ತಾ ಚೆನ್ನಾಗಿ ನಡೆಯುವುದನ್ನು ಅಭ್ಯಾಸ ಮಾಡಿಕೊಳ್ಳುವುದು. ಈ ಮೂರು ಚಕ್ರದ ಗಾಡಿಯು ಈ ವಯಸ್ಸಿಗೆ ತಕ್ಕ ಆಟಿಗೆ.

ಒಂದು ವರ್ಷದ ಮಗು ಮರದ ತುಂಡನ್ನು ಚೆನ್ನಾಗಿ ಹಿಡಿಯುವಷ್ಟು ಶಕ್ತಿಯನ್ನು ಪಡೆದಿದ್ದರೂ ಅದನ್ನು ಸರಿಯಾಗಿ ಒಂದು ಕಡೆ ಇಟ್ಟು ಬೆಟ್ಟುಗಳನ್ನು ಸಡಿಲಿಸಿಕೊಳ್ಳುವ ಶಕ್ತಿಯನ್ನು ಸರಿಯಾಗಿ ಹೊಂದಿರುವುದಿಲ್ಲ. ಈ ವಯಸ್ಸಿನಲ್ಲಿ ಕೈಯಲ್ಲಿಟ್ಟುಕೊಂಡಿರುವ ಮರದ ತುಂಡನ್ನು ಸುಮ್ಮನೆ ಒಂದು ಕಡೆ ಹಾಕುವುದನ್ನು ಮಾತ್ರ ಬಲ್ಲುದು. ಆದರೆ ಒಂದೂವರೆವರ್ಷ ವಯಸ್ಸಿನ ಮಗು ಹಿಡಿಯುವುದನ್ನೂ ಬಿಡುವುದನ್ನೂ ಚೆನ್ನಾಗಿ ಮಾಡಬಲ್ಲುದಾದುದರಿಂದ ಮೂರು ಮರದ ತುಂಡುಗಳನ್ನು ಒಂದರ ಮೇಲೊಂದನ್ನಿಟ್ಟು ಗೋಪುರವನ್ನು ಕಟ್ಟುವುದು. ಈಗ ಚೆಂಡನ್ನು ಕೈಯಲ್ಲಿ ಒಡಿದು ಎಸೆಯುವ ಸಾಮರ್ಥ್ಯವನ್ನು ಪಡೆದಿರುವುದು. ಆದರೆ ಒಂದು ವರ್ಷದ ಮಗು ತನ್ನ ಕೈಯಲ್ಲಿರುವ ಚೆಂಡನ್ನು ಸುಮ್ಮನೆ ಬಿಡುವುದನ್ನು ಮಾತ್ರ ಮಾಡುತ್ತಿತ್ತು. ಒಂದು ವರ್ಷದ ಮಗುವಿಗೆ ತೋಳು ಮತ್ತು ಮುಂಗೈಗಳ ಮಾಂಸಖಂಡಗಳ ಮೇಲೆ ಮಾತ್ರ ಹತೋಟಿ ಇದ್ದು, ಈಗ ಅಂದರೆ ಒಂದೂವರೆ ವರ್ಷದ ವಯಸ್ಸಿಗೆ ಮೊಣಕೈಯ ಮಾಂಸಖಂಡಗಳ ಮೇಲೆಯೂ ಹತೋಟಿ ಬೆಳೆದು ಎಸೆಯುವ ಶಕ್ತಿಯನ್ನು ಪಡೆಯುವುದು.

ಈ ವಯಸ್ಸಿನಲ್ಲಿ ಮಗು, ಮೇಲಿನಿಂದ ಕೆಳಕ್ಕೆ ನೇರವಾಗಿ ಗೆರೆಯನ್ನು ಎಳೆದು ತೋರಿಸಿದರೆ ಅದನ್ನು ಅನುಕರಿಸಿ ತಾನೂ ಗೆರೆಯನ್ನು ಎಳೆಯುವುದು. ಆದರೆ ಅಡ್ಡಡ್ಡಲಾಗಿ ಬರೆದಿರುವ ಗೆರೆಯನ್ನು ಅನುಕರಿಸಬೇಕಾದರೆ ಇನ್ನು ಆರು ತಿಂಗಳಾದರೂ ಕಳೆಯಬೇಕು. ಈಗ ಮೇಲಿನಿಂದ ಕೆಳಕ್ಕೆ ಎನ್ನುವ ಅರಿವುಂಟಾಗಲು ಆರಂಭ

ವಾಗುವುದು. ನಾಲ್ಕಾರು ಮರದ ತುಂಡುಗಳನ್ನು ಕೊಟ್ಟರೆ ಒಂದರ ಮೇಲೊಂದನ್ನಿಟ್ಟು ಎರಡು ಅಥವಾ ಮೂರು ಮರದ ತುಂಡುಗಳಿಂದ ಸ್ತಂಭವನ್ನು ಕಟ್ಟುವುದು.

ಒಂದು ವರ್ಷದ ಮಗು ಚಿತ್ರಗಳನ್ನು ನೋಡಿದರೆ ಯಾವ ನಿರ್ದಿಷ್ಟವಾದ ಪ್ರತಿಕ್ರಿಯೆಯನ್ನೂ ತೋರಿಸುತ್ತಿರಲಿಲ್ಲ. ಆಗ ಚಿತ್ರದಲ್ಲಿ ಒಂದು ಆಕಾರ ಒಂದು ರಚನೆಯಿರುವುದೆಂದು ಮಗುವಿಗೆ ಭಾಸವಾಗುತ್ತಿರಲಿಲ್ಲ. ಆದರೆ ಒಂದೂವರೆ ವರ್ಷದ ವಯಸ್ಸಿನಲ್ಲಿ ಗಾಡಿ, ನಾಯಿ, ಗಡಿಯಾರ ಮುಂತಾದ ಬಳಕೆಯಲ್ಲಿರುವ ವಸ್ತುಗಳ ಚಿತ್ರಗಳನ್ನು ತೋರಿಸಿದರೆ ಗುರುತಿಸಬಲ್ಲುದು. " ನಾಯಿಯನ್ನು ತೋರಿಸು " ಎಂದರೆ ನಾಯಿಯ ಚಿತ್ರದ ಕಡೆಗೆ ಬೆರಳನ್ನು ತೋರಿಸುವುದು. ಈ ವಯಸ್ಸಿನಲ್ಲಿಯೇ ಮಕ್ಕಳು ಕೇಳಿದುದಕ್ಕೆ ಸರಿಯಾಗಿ ಕಣ್ಣು, ಮೂಗು, ತಲೆ, ಕೂದಲು, ಮುಂತಾದ ಅವಯವಗಳನ್ನು ತೋರಿಸುವರು. ಅಂದರೆ ಈಗ ಒಂದೊಂದು ಭಾಗದ ಪ್ರತ್ಯೇಕತ್ವವು ಮನಸ್ಸಿಗೆ ಹೊಳೆಯುವುದು. ' ರಾಶಿ ' ' ಗುಂಪು ' ಎಂಬ ಭಾವವೂ ತಲೆದೋರುವುದು. ಮಗುವಿನ ಕೈಗೆ ನಾಲ್ಕಾರು ಮರದ ತುಂಡುಗಳನ್ನು ಕೊಟ್ಟರೆ, ಅವುಗಳನ್ನೆಲ್ಲಾ ಒಂದು ಕಡೆಯಿಟ್ಟು ಒಂದು 'ರಾಶಿ' ಯನ್ನು ಮಾಡುವುದು. ಒಂದು ವರ್ಷದ ಮಗುವಿಗೆ ಈ ತಿಳಿವಳಿಕೆ ಇರಲಿಲ್ಲ. ಮಗುವಿಗೆ ಬೆಳೆವಣಿಗೆಯ ಈ ಮಟ್ಟದಲ್ಲಿ ಒಂದು ಕೆಲಸವು ' ಆಗಿ ಮುಗಿಯಿತು ' ಎಂಬ ಭಾವನೆಯುಂಟಾಗಲು ಪ್ರಾರಂಭವಾಗುವುದು. ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವಾಗ ಜೊತೆಯಲ್ಲಿರುವವರಿಗೆ ಕೈ ಆಡಿಸಿ, ಹೋಗುವೆನೆಂದು ತಿಳಿಸುವುದು. ಯಾವುದಾದರೂ ಸಾಮಾನುಗಳನ್ನು ' ತೆಗೆದುಕೊಂಡು ಬಾ ' ಎಂದು ಹೇಳಿದರೆ ಅವುಗಳನ್ನು ತಂದುಕೊಟ್ಟು, ಆ ಕೆಲಸವನ್ನು ಮಾಡಿ ಆಯಿತೆಂದು ಸಂತೋಷವನ್ನು ತೋರಿಸುವುದು.

ಈ ವಯಸ್ಸಿನಲ್ಲಿ ತಂದೆತಾಯಿಗಳಾಡುವ ಮಾತುಗಳನ್ನು ಚೆನ್ನಾಗಿ ಗ್ರಹಿಸುವುದು ಮಾತ್ರವಲ್ಲದೆ ಅದಕ್ಕೆ ತಕ್ಕ ಹಾಗೆ ನಡೆದು ಕೊಳ್ಳುವುದು. ಮಾತಿನ ಅರ್ಥಗ್ರಹಣವು ಬಹಳಮಟ್ಟಿಗೆ ಮುಂದು ವರಿಯುವುದು. ಆದರೆ ಮಗು ಎಂಟು ಹತ್ತು ಪದಗಳನ್ನು ಮಾತ್ರ ಉಪಯೋಗಿಸುವ ಶಕ್ತಿಯನ್ನು ಪಡೆದಿರುವುದು. ತನ್ನ ಭಾವನೆಗ ಳನ್ನು ಪದಗಳ ಮೂಲಕವೂ ಸನ್ನೆಗಳ ಮೂಲಕವೂ ವ್ಯಕ್ತಪಡಿಸು ವುದು. ಹಸಿವಾದಾಗ ‘ ಊಟ ’ ಎನ್ನುವುದು. ಹೊಟ್ಟೆ ತುಂಬಿದರೆ ‘ ಸಾಕು ’ ಎಂದು ಹೇಳುವುದು. ಎರಡು ಮೂರು ತಿಂಗಳ ಹಿಂದೆ ತನಗೆ ಯಾವುದಾದರೂ ವಸ್ತುವು ಬೇಡವಾದರೆ ತಲೆಯನ್ನು ಈ ಕಡೆ ಯಿಂದ ಆ ಕಡೆಗೆ ಆಡಿಸುತ್ತಿತ್ತು ; ಈಗಲಾದರೋ ‘ ಬೇಡ ’ ಎಂದು ಹೇಳಿ ತಲೆಯನ್ನು ಆಡಿಸುವುದು. ಅರ್ಥಪೂರಿತವಾದ ಎಂಟು ಹತ್ತು ಪದಗಳನ್ನು ಉಪಯೋಗಿಸಬಲ್ಲುದಾದರೂ ಅರ್ಥವಿಲ್ಲದ ನಾನಾ ವಿಧವಾದ ಸದ್ದುಗಳನ್ನು ಮಾಡುತ್ತಿರುವುದು. ಕೋಪ, ಭಯ, ಇಚ್ಛೆ ಮುಂತಾದ ಭಾವೋದ್ರೇಕಗಳಿಗೆ ಅನುಗುಣವಾಗಿ ಶಬ್ದಗಳನ್ನು ಮಾಡುವುದು. ಬೆಳೆಯುತ್ತ ಬೆಳೆಯುತ್ತ ಮಗು ಕ್ರಮೇಣ ಈ ಸದ್ದುಗಳನ್ನು ಬಿಟ್ಟು ಅರ್ಥವುಳ್ಳ ಪದಗಳನ್ನು ಉಪಯೋಗಿಸತೊಡ ಗುವುದು.

ಒಂದೂವರೆ ವರ್ಷದ ಮಗುವು ‘ ಇದು ನನ್ನದು ’ ‘ ನಾನು ’ ಎಂಬ ಭಾವನೆಗಳನ್ನು ಹೊರಪಡಿಸಿ ತನ್ನ ವ್ಯಕ್ತಿತ್ವದ ಅರಿವು ಆರಂಭ ವಾಗುತ್ತಿರುವುದೆಂಬುದನ್ನು ಸೂಚಿಸುವುದು. ಇತರ ಮಕ್ಕಳಾಗಲೀ ದೊಡ್ಡವರಾಗಲೀ ಕೊಠಡಿಯೊಳಗೆ ಬಂದರೆ ತನ್ನ ಕೆಲಸಗಳನ್ನು ನಿಲ್ಲಿಸಿ, ಅವರನ್ನು ದೃಷ್ಟಿಸಿ ನೋಡುವುದು; ಸಾಮಾಜಿಕ ವರ್ತನೆಯು ಇನ್ನೂ ಸ್ವಲ್ಪ ಮುಂದುವರಿಯುವುದು. ಈ ವಯಸ್ಸಿನಲ್ಲಿ ಮಗುವು ತನ್ನಷ್ಟಕ್ಕೆ ತಾನೆ ಆಡಿಕೊಳ್ಳುತ್ತಿದ್ದರೂ ಕೊಟಡಿಯಲ್ಲಿರುವ ಮತ್ತೊಂ

ದು ಮಗು ಹೊರಗೆ ಹೊರಟು ಹೋದರೆ ಅಳುವುದು ; ಆ ಮಗು ವನ್ನು ಹಿಂಬಾಲಿಸಿ ತಾನೂ ಹೊರಡುವುದು. ಹೀಗೆ ಬೇರೆ ಮಕ್ಕಳು ತನ್ನನ್ನು ಬಿಟ್ಟುಹೋದರೆ ಅಸಮಾಧಾನವನ್ನು ತೋರಿಸುವುದು. ಬೇರೆ ಮಗುವಿನ ಜೊತೆಯಲ್ಲಿ ಸೇರಿ ಆಡದೆ ಹೋದರೂ ಆ ಮಗು ತಾನಿ ರುವ ಕೊಟಡಿಯಲ್ಲಿದ್ದರೆ ತನಗೊಂದು ಸಂತೋಷವೆಂಬುದನ್ನು ತೋ ರಿಸುವುದು.

ಹದಿನೈದು ತಿಂಗಳ ಮಗು ನಿಂತ ಕಡೆ ಉಚ್ಚೆ ಹುಯ್ದು ಅನಂತರ ತಾಯಿಗೆ ತಾನು ಉಚ್ಚೆ ಹೊಯ್ದೆನೆಂದು ಹೇಳುವುದು. ಆದರೆ ಹದಿನೆಂಟು ತಿಂಗಳ ಮಗುವಾದರೋ ಉಚ್ಚೆ ಹೊಯ್ಯಬೇಕಾ ದರೆ ತಾಯಿಯನ್ನು ಕೂಗಿ ‘ ಉಚ್ಚೆ ’ ಎಂದು ಹೇಳುವುದು. ಈ ವಿಧ ವಾಗಿ ತನ್ನ ಮೂತ್ರ ವಿಸರ್ಜನೆಯ ಮೇಲೆ ಹತೋಟಿಯನ್ನು ಬೆಳೆಸಿ ಕೊಳ್ಳುವುದು.

ಹದಿನೆಂಟು ತಿಂಗಳ ಮಗು ಇತರರ ಆಟಪಾಟಗಳನ್ನು ಅನುಕರಿಸುವುದು. ಇದರಿಂದ ಉಂಟಾಗುವ ವಿನೋದವನ್ನು ಆನಂದಿ ಸುವುದು. ಬಾಚಣಿಗೆಯನ್ನು ಹಿಡಿದು ತನ್ನ ತಲೆಯನ್ನು ‘ ಬಾಚಿ ’ ಕೊಳ್ಳುವುದು, ಕೆಲವು ವೇಳೆ ಇತರರ ತಲೆಯನ್ನು ಬಾಚಲು ಹೋ ಗುವುದು. ಒಂದು ಕಡ್ಡಿಯನ್ನು ತೆಗೆದು ಬಾಯಲ್ಲಿಟ್ಟು ‘ ಸಿಗರೇಟು ಸೇದುವುದು. ’ ಪುಸ್ತಕ ಮತ್ತು ವೃತ್ತಪತ್ರಿಕೆಗಳನ್ನು ಹಿಡಿದು ಪುಟ ಗಳನ್ನು ತಿರುವಿಹಾಕಿ ‘ ಓದುವುದು. ’ ಹೀಗೆ ‘ ಇತರರು ’ ಮತ್ತು ‘ ಇತರರ ಕೆಲಸಗಳು ’ ತನ್ನ ಆವರಣದಲ್ಲಿರುವುವೆಂಬುದನ್ನು ತಿಳಿ ಯುವುದು.

## ಎರಡು ವರ್ಷಗಳಲ್ಲಿ

ಎರಡು ವರ್ಷದ ವಯಸ್ಸಿನ ಮಗುವಿನ ದೇಹದ ಅಂಗ ಪ್ರಮಾ ಣವು ಇನ್ನೂ ಸಾಧಾರಣ ಮನುಷ್ಯನ ಅಂಗ ಪ್ರಮಾಣಕ್ಕೆ ಬಂದಿರು

ವುದಿಲ್ಲ ; ಕಾಲುಗಳು ಬಹಳ ತುಂಡಾಗಿಯೇ ಕಾಣುವುವು ; ತಲೆಯು ದಪ್ಪನಾಗಿರುವಂತೆಯೇ ಕಾಣುವುದು. ಓಡಾಡುವಾಗ ತಡವರಿಸುವುದು.

ಈ ವಯಸ್ಸಿನಲ್ಲಿ ಓಡಾಟ ಮತ್ತು ದೇಹ ಚಲನೆಗಳು ಮಗುವಿಗೆ ಬಹಳ ಇಷ್ಟ. ಕಣಿಕಾಲುಗಳ ಮೇಲೆ ಹತೋಟಿ ಹೆಚ್ಚಾಗಿ ಚೆನ್ನಾಗಿ ಓಡಾಡಬಲ್ಲುದು. ಈ ವಯಸ್ಸಿನಲ್ಲಿ ಒಂದು ಕಡೆ ಕುಳಿತು ಆಡುವುದು ಮಗುವಿಗೆ ಬೇಸರ. ದೇಹವನ್ನು ನಾನಾ ಕಡೆ ಬಗ್ಗಿಸಿ ಅಂಗಗಳ ಮೇಲಿನ ಸ್ವಾಧೀನತೆಯನ್ನು ಮುಂದುವರಿಸಿಕೊಳ್ಳುವುದು. ಚೆನ್ನಾಗಿ ಓಡಾಡಿ, ಕುಣಿದು ಕೈಚಪ್ಪಾಳೆ ಹೊಡೆದು ನಕ್ಕು, ಈ ರೀತಿಯ ದೇಹ ಚಲನೆಯ ಮೂಲಕ ತನ್ನ ಸಂತೋಷವನ್ನು ಹೊರಸೂಸುವುದು. ಈಗ ಯಾರ ಸಹಾಯವೂ ಇಲ್ಲದೆ ಹಂತವನ್ನು ಹತ್ತಿ ಇಳಿಯುವುದು. ಆದರೆ ಒಂದೊಂದು ಹಂತದಲ್ಲಿಯೂ ಮೊದಲು ಒಂದು ಕಾಲನ್ನಿಟ್ಟು ಮತ್ತೊಂದು ಕಾಲನ್ನು ತಂದು ಜೋಡಿಸಿ ಅನಂತರ ಮುಂದಕ್ಕೆ ಹೆಜ್ಜೆ ಇಡುವುದು. ಆರೆಂಟು ಅಂಗುಲ ಎತ್ತರದಿಂದ ಕೆಳಕ್ಕೆ ಹಾರಬಲ್ಲುದು. ಚೆಂಡನ್ನು ' ಒದೆ ' ಎಂದರೆ ಚೆಂಡಿನ ಹತ್ತಿರಕ್ಕೆ ನಡೆದುಹೋಗಿ ಅದನ್ನು ಒದೆಯುವುದು. ಹದಿನೆಂಟು ತಿಂಗಳ ಮಗುವಾಗಿದ್ದಾಗ ಈ ಸಾಮರ್ಥ್ಯವಿರಲಿಲ್ಲ. ಓಡಬಲ್ಲುದಾಗಿದ್ದರೂ ಹಠಾತ್ತಾಗಿ ನಿಲ್ಲಲೂ ಮತ್ತು ಇದ್ದಕ್ಕಿದ್ದಹಾಗೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ತಿರುಗಲೂ ಆಗುತ್ತಿರಲಿಲ್ಲ.

ಈ ವಯಸ್ಸಿನಲ್ಲಿ ಕೈಬೆರಳುಗಳ ಮೇಲಿನ ಹತೋಟಿಯೂ ಮುಂದವರಿಯುವುದು. ಹದಿನೆಂಟು ತಿಂಗಳ ವಯಸ್ಸಿನಲ್ಲಿ, ಪುಸ್ತಕವನ್ನು ತೆಗೆದುಕೊಡು ಒಟ್ಟಿಗೆ ಹಲವಾರು ಪುಟಗಳನ್ನು ತಿರುವಿಹಾಕುತ್ತಿದ್ದ ಮಗುವು ಈಗ ಒಂದೊಂದು ಪುಟವನ್ನೂ ಬಿಡಿಸಿ ತಿರುವಿಹಾಕುವ ಶಕ್ತಿಯುನ್ನು ಪಡೆದಿರುವುದು ; ಅಂದರೆ ಹಿಡಿಯುವುದರಲ್ಲಿ

ಯೂ, ಬಿಡುವುದರಲ್ಲಿಯೂ ಕೈಬೆರಳುಗಳ ಮೇಲೆ ಸ್ವಾಧೀನತೆಯನ್ನು ಪಡೆದಿರುವುದು. ಈ ಶಕ್ತಿಯ ಬೆಳೆವಣಿಗೆಯು ಮಗು ಆಡುವ ಮರದ ತುಂಡುಗಳ ಆಟದಲ್ಲಿ ಸ್ಪಷ್ಟವಾಗಿ ಕಾಣಬರುವುದು. ಹದಿನೆಂಟು ತಿಂಗಳ ವಯಸ್ಸಿನಲ್ಲಿ ಮಗು ಮರದ ತುಂಡುಗಳನ್ನು ಒಂದರ ಮೇಲೊಂದನ್ನಿಟ್ಟು ಸ್ತಂಭವನ್ನು ಕಟ್ಟುವುದೆಂದು ತಿಳಿದಿರುವೆವಷ್ಟೆ. ಈಗ ಅಂದರೆ ಎರಡುವರ್ಷ ವಯಸ್ಸಿನಲ್ಲಿ ಆರು ಮರದ ತುಂಡುಗಳಿಂದ ಗೋಪುರವನ್ನು ಕಟ್ಟುವುದು. ಕತ್ತರಿಯನ್ನು ಉಪಯೋಗಿಸಿ ಕಾಗದವನ್ನು ಕತ್ತರಿಸಬಲ್ಲುದು. ಮಣಿಗಳನ್ನು ಸೂಜಿದಾರಗಳಿಂದ ಪೋಣಿಸಬಲ್ಲುದು. ಒಂದೇ ಕೈಯಿಂದ ಹಾಲಿನ ಲೋಟವನ್ನು ಹಿಡಿದು ಹಾಲನ್ನು ಕುಡಿಯಬಲ್ಲುದು, ಹೀಗೆ ಕೈ ಹಿಡಿತದಲ್ಲಿಯೂ ಬಿಡುವಿಕೆಯಲ್ಲಿಯೂ ಕುಶಲತೆಯನ್ನು ಪಡೆಯುವುದು.

ಮರದ ತುಂಡುಗಳನ್ನು ಒಂದರ ಮೇಲೊಂದನ್ನಿಡುವುದರ ಮೂಲಕ ಮೇಲಿನಿಂದ ಕೆಳಗಿನ ವರೆಗೆ ಎಂಬ ಭಾವನೆಯು ಮುಂದುವರಿಯುವುದೊಂದೇ ಅಲ್ಲದೆ ಈ ವಯಸ್ಸಿನ ಮಗು ಅಡ್ಡಗಲದ ಭಾವತೆಯನ್ನು ಪಡೆಯಲಾರಂಭಿಸುವುದು. ಹದಿನೆಂಟು ತಿಂಗಳ ವಯಸ್ಸಿನ ಮಗು ಮೇಲಿನಿಂದ ಕೆಳಗೆ ಎಳೆದಿರುವ ಗೀರನ್ನು ಅನುಕರಿಸಿ ತಾನೂ ಗೆರೆಯನ್ನು ಎಳೆಯಬಲ್ಲುದೆಂದು ಹಿಂದೆಯೇ ತಿಳಿಸಲಾಗಿದೆ. ಇಪ್ಪತ್ತು ನಾಲ್ಕು ತಿಂಗಳ ವಯಸ್ಸಿನಲ್ಲಿ ಅಡ್ಡಡ್ಡಲಾಗಿ ಎಳೆದಿರುವ ಗೆರೆಯನ್ನೂ ಅನುಕರಿಸಬಲ್ಲುದು. ಅಡ್ಡಡ್ಡಲಾಗಿ ಗೆರೆ ಎಳೆಯುವುದು ಮಾತ್ರವಲ್ಲದೆ ನಾಲ್ಕಾರು ಮರದ ತುಂಡುಗಳನ್ನು ಒಂದರ ಮಗ್ಗುಲಲ್ಲೊಂದನ್ನಿಟ್ಟು 'ರೈಲುಗಾಡಿ' ಯನ್ನು ಜೋಡಿಸುವುದು. ಆದುದರಿಂದ ಮರದ ತುಂಡುಗಳನ್ನು ಒಂದರ ಮೇಲೊಂದನ್ನಿಡುವ ಕೆಲಸವು ಒಂದರ ಮಗ್ಗುಲಲ್ಲಿ ಮತ್ತೊಂದನ್ನಿಡುವ ಕೆಲಸಕ್ಕಿಂತ ಸುಲಭವಾದುದೆಂದು ಧಾರಾಳವಾಗಿ ಹೇಳಬಹುದು. ಅಡ್ಡ

ಡ್ಡಲಾಗಿ ಗೆರೆ ಎಳೆಯುವುದಕ್ಕೂ, ಒಂದರ ಮಗ್ಗುಲಲ್ಲಿ ಮತ್ತೊಂದು ಮರದ ತುಂಡನ್ನಿಡುವುದಕ್ಕೂ ಮಾನಸಿಕ ಬೆಳೆವಣಿಗೆಯೂ ಅವಯವಗಳ ಪಕ್ವತೆಯೂ ಮುಂದುವರಿದಿರಬೇಕು.

ಈ ವಯಸ್ಸಿಗೆ ಮಗುವಿನ ಸ್ಮರಣಶಕ್ತಿಯು ಹೆಚ್ಚುವುದು. ಕೈಗೆ ಸಿಕ್ಕದಿರುವ ಆಟಿಗೆಯನ್ನು ನೆನೆಸಿಕೊಂಡು ಅದನ್ನು ಹುಡುಕಲು ಹೊರಡುವುದು. ಹಿಂದಿನ ದಿನ ನಡೆದ ಘಟನೆಗಳನ್ನು ಕುರಿತು ಮಾತನಾಡುವುದು. ಹದಿನೆಂಟು ತಿಂಗಳ ಮಗುವಿನಲ್ಲಿ ಈ ಸ್ಮರಣಶಕ್ತಿಯು ಬಹಳ ಕಡಮೆಯಾಗಿತ್ತು. ಸಾಧಾರಣವಾಗಿ ಹದಿನೆಂಟು ತಿಂಗಳ ಮಗುವು ಆಗ ನಡೆಯುತ್ತಿರುವ ವಿಷಯಗಳಲ್ಲಿಯೇ ಮನಸ್ಸನ್ನಿಟ್ಟು ಆಡಿಕೊಳ್ಳುತ್ತಿತ್ತು. ಆದರೆ ಎರಡು ವರ್ಷದ ಮಗು ಹಿಂದೆ ನಡೆದ ವಿಷಯಗಳನ್ನೂ ಇಂದು ನಡೆಯುವ ಹಾಗೆ ಮಾತನಾಡುವುದು. ಭೂತಕಾಲದ ಪ್ರಯೋಗವು ತಿಳಿದಿರುವುದಿಲ್ಲ

ಹದಿನೆಂಟು ತಿಂಗಳ ಮಗು ಗೋಳಾಕಾರದ ಮರದ ತುಂಡನ್ನು 'ಆಕಾರದ ಹಲಗೆ' ಯಲ್ಲಿ ಗೋಳಾಕಾರದ ಹಳ್ಳದಲ್ಲಿಟ್ಟು ಜೋಡಿಸುವುದು. ಇಪ್ಪತ್ತೊಂದು ತಿಂಗಳ ವಯಸ್ಸಿನಲ್ಲಿ ಚೌಕಾಕಾರದ ಮರದ ತುಂಡನ್ನು ಸರಿಯಾಗಿ ಜೋಡಿಸುವುದು. ಈ ರೀತಿ ವಯಸ್ಸು ಹೆಚ್ಚಿದಂತೆಲ್ಲಾ ಆಕೃತಿಯ ಜ್ಞಾನವು ಮುಂದುವರಿಯುವುದು, ಮತ್ತು ಜೋಡಿಸುವ ಕೈ ಚಳಕವೂ ಹೆಚ್ಚುವುದು.

ಹದಿನೆಂಟುತಿಂಗಳ ಮಗು ಕುರ್ಚಿಯೊಂದನ್ನು ಕಂಡೊಡನೆಯೇ ಅದರ ಮೇಲೆ ಹತ್ತಿ ಇಳಿದು ಅವನ್ನು ಈ ಕಡೆಯಿಂದ ಆ ಕಡೆಗೆ ತಳ್ಳಿ ಆಡಿಕೊಳ್ಳುವುದು. ಎರಡು ವರ್ಷದ ಮಗು ತನಗೆ ಎಟಕದಿರುವ ಪದಾರ್ಥವನ್ನು ಎಟುಕಿಸಿಕೊಳ್ಳಲು ಕುರ್ಚಿಯನ್ನು ಆ ಜಾಗಕ್ಕೆ ತಳ್ಳಿಕೊಂಡು ಹೋಗಿ ಅದರ ಮೇಲೆ ಹತ್ತಿ ಪ್ರಯತ್ನಿ

ಸುವುದು ಹೀಗೆ ಮಗುವಿನ ಆಲೋಚನಾಶಕ್ತಿಯೂ ಊಹಾ ಶಕ್ತಿಯೂ ಬೆಳೆಯುವುವು.

ಇತರರನ್ನು ನೋಡಿ ಅನುಕರಿಸುವುದು ಇನ್ನೂ ಹೆಚ್ಚಾಗುವುದು; ಮಗು ತಾನು ಕೇಳಿದುದನ್ನೂ, ನೋಡಿದುದನ್ನೂ ಅಭಿನಯ ಮಾಡಿ ತೋರಿಸುವುದು. ಮಾತಿನ ಅರ್ಥಕ್ಕೆ ಸರಿಯಾಗಿ ಕೈಬಾಯಿಗಳನ್ನು ಚಲನೆ ಮಾಡುವುದು. ದೇಹವನ್ನು ಅಲುಗಿಸದೆ ಭಾಷೆಯ ಮೂಲಕವೇ ಭಾವನೆಯನ್ನು ವ್ಯಕ್ತಪಡಿಸುವುದು ಈ ವಯಸ್ಸಿನಲ್ಲಿ ಸಾಧ್ಯವಿಲ್ಲ. ಆದುದರಿಂದಲೇ ಮಾತನಾಡುವಾಗ ಜೊತೆಯಲ್ಲಿಯೇ ಮಾತಿಗೆ ತಕ್ಕಂತೆ ನಟಿಸುವುದು. ಕೆಲಸ ಮಾಡುವಾಗ ಕೆಲಸಕ್ಕೆ ತಕ್ಕಹಾಗೆ ಮಾತನಾಡುವುದು. ಮಾತುಗಳನ್ನು ದೇಹದ ಇತರ ಭಾಗಗಳ ಚಲನೆಯಿಂದ ಪ್ರತ್ಯೇಕಿಸಬೇಕಾದರೆ ಇನ್ನೂ ಸ್ವಲ್ಪ ವಯಸ್ಸು ಕಳೆಯಬೇಕು.

ಒಂದು ವರ್ಷದ ವಯಸ್ಸಿನಲ್ಲಿ ಎರಡು ಮೂರು ಮಾತುಗಳನ್ನು ಆಡುತ್ತಿದ್ದ ಮಗು ಹದಿನೆಂಟು ತಿಂಗಳ ವಯಸ್ಸಿನಲ್ಲಿ ನಾಲ್ಕಾರು ಮಾತುಗಳನ್ನಾಡುತ್ತಿದ್ದು, ಈಗ ಸಾಧಾರಣವಾಗಿ ಮುನ್ನೂರು ಪದಗಳನ್ನು ಕಲಿತಿರುವುದು. ಬಹಳ ಮಟ್ಟಿಗೂ ತನ್ನ ಭಾವನೆಗಳನ್ನು ಭಾಷೆಯ ಮೂಲಕ ಹೊರಪಡಿಸುವುದು. ಆದರೆ ಇನ್ನೂ ಸ್ವಲ್ಪ ಮಟ್ಟಿಗೆ ಅರ್ಥವಿಲ್ಲದ ಸದ್ದುಗಳನ್ನು ಮಾಡುತ್ತಿರುವುದು. ಕ್ರಮೇಣ ಈ ಸದ್ದುಗಳು ಕಡಮೆಯಾಗಿ ಮಗು ಬೆಳೆಯುತ್ತ ಬೆಳೆಯುತ್ತ ಅರ್ಥವುಳ್ಳ ಶಬ್ದಗಳನ್ನು ಮಾತ್ರ ಮಾಡುವುದು.

ತನ್ನನ್ನು ಕುರಿತು ಮಾತನಾಡುವಾಗ 'ನಾನು' ಎಂಬ ಸರ್ವನಾಮಕ್ಕೆ ಬದಲಾಗಿ ತನ್ನ ಹೆಸರನ್ನೇ ಮಗು ಹೇಳಿಕೊಳ್ಳುವುದು. 'ನಾನು ಮಾಡಿದೆ' ಎನ್ನುವುದಕ್ಕೆ ಬದಲಾಗಿ 'ರಾಮ ಮಾಡಿದ' ಎಂದು ಹೇಳುವುದು, ಈ ವಯಸ್ಸಿನಲ್ಲಿ ಪದಗಳ ಪುನರಾವೃತ್ತಿ

ಇರುವ ಹಾಡುಗಳನ್ನು ಹೇಳುವುದು ಮಗುವಿಗೆ ಬಹಳ ಇಷ್ಟ. ಆದುದರಿಂದಲೇ ಸುಲಭವಾದ "ಮಕ್ಕಳ ಗೀತೆ (ನರ್ಸರಿ ರೈಮ್ಸ್)" ಗಳನ್ನು ಹೇಳಿಕೊಟ್ಟರೆ ಮಗು ಬಹಳ ಆನಂದದಿಂದ ಕಲಿತುಕೊಳ್ಳು ವುದು.

ಎರಡು ವರ್ಷದ ಮಗು 'ನನ್ನದು' ಎಂಬ ಭಾವನೆಯನ್ನು ಬಹಳ ದೃಢತೆಯಿಂದ ಹೊರಪಡಿಸುವುದು. ತನ್ನ ಸಾಮಾನುಗ ಳನ್ನು 'ನನ್ನದು' ಎಂದು ತಿಳಿದು ಅವುಗಳನ್ನು ಭದ್ರಪಡಿಸಿಕೊ ಳ್ಳುವುದು. ತನ್ನ ತಂದೆ ತಾಯಿಗಳು ತನಗೆ ಸೇರಿದವರು ಎಂದು ತಿಳಿಯುವುದು. ಬೇರೆಯವರು ಬಂದು 'ಅಮ್ಮ ನನ್ನದು' ಎಂದರೆ 'ಇಲ್ಲ ನನ್ನದು' ಎಂದು ಮಗು ಹೇಳಿ ವಾದಿಸುವುದು. ಪದೇ ಪದೇ ಹೀಗೆ ಹೇಳಿದರೆ, ಮಗು ಮೊದಲು ಕೋಪಗೊಂಡು ಆಮೇಲೆ ಅಳಲಾರಂಭಿಸುವುದು. ಇನ್ನು ಸ್ವಲ್ಪ ವಯಸ್ಸಾದ ಮೇಲೆ ಇಂತಹ ಮಾತುಗಳು ಹಾಸ್ಯಕ್ಕಾಗಿ ಎಂದು ತಿಳಿದು, ಬೇರೆಯವರು 'ಅಮ್ಮ ನನ್ನದು' ಎಂದರೆ ಅದರಿಂದ ತನಗೆ ಯಾವ ಲೋಪವೂ ಉಂಟಾಗ ಲಾರದು ಎಂದು ಅರಿತು ಸುಮ್ಮನಿರುವುದು.

ಮಗು ತನ್ನ ಪ್ರತಿಬಿಂಬವನ್ನು ಕನ್ನಡಿಯಲ್ಲಿ ನೋಡಿ ಆ ಬಿಂಬವು ತನ್ನದೆಂದು ಗುರುತಿಸುವುದು. ಇತರರ ಗಮನವನ್ನು ತನ್ನ ಪ್ರತಿಬಿಂಬದ ಕಡೆ ಸೆಳೆದು 'ನೋಡು ರಾಮ ಅಲ್ಲಿ' 'ಅಲ್ಲಿ ಪಾಪ ನೋಡು' ಎನ್ನುವುದು. ಇತರ ಮಕ್ಕಳ ಜೊತೆಯಲ್ಲಿ ಸೇರಿ ಆಡಲು ಆರಂಭಿಸುವುದು. ಆದರೆ ಇನ್ನೂ ಬೇರೆ ಮಕ್ಕಳಿದ್ದರೂ ತನ್ನ ಆಟವನ್ನು ತಾನೇ ಆಡಿಕೊಳ್ಳುವುದು.

ಮಗು ಈಗ ತನ್ನ ಬಟ್ಟೆಗಳನ್ನು ಹಾಕಿಕೊಳ್ಳುವುದರಲ್ಲಿಯೂ, ಸ್ನಾನ ಮಾಡಿಸಿಕೊಳ್ಳುವುದರಲ್ಲಿಯೂ, ತಾಯಿಯೊಡನೆ ಬಹಳ ಮಟ್ಟಿಗೂ ಸಹಕರಿಸಿಕೊಳ್ಳುವುದು. ತನ್ನ ಉಡುಪಿನ ಗುಂಡಿಗ

ಳನ್ನು ಹಾಕಿ ತೆಗೆಯುವುದರಲ್ಲಿ ಆಸಕ್ತಿಯನ್ನು ತೋರಿಸುವುದು. ಕೈ ತುತ್ತನ್ನು ಚೆಲ್ಲದೆ ಬಾಯೊಳಗೆ ಹಾಕಿಕೊಳ್ಳುವುದು. ಸಾಧಾರಣ ವಾಗಿ ಒಂದುವರ್ಷ ವಯಸ್ಸಿಗೆ ಮಲವಿಸರ್ಜನೆಯ ಮೇಲೆ ಹತೋಟಿ ಪಡೆಯುವುದೆಂದು ನೋಡಿರುವೆನಷ್ಟೆ. ಈಗ ಅಂದರೆ ಎರಡು ವರ್ಷಗಳ ವಯಸ್ಸಿನಲ್ಲಿ ಮೂತ್ರ ವಿಸರ್ಜನೆಯ ಮೇಲೆಯೂ ಹತೋಟಿಯನ್ನು ಪಡೆಯುವುದು. ರಾತ್ರಿಯ ವೇಳೆ ಹಾಸಿಗೆಯಲ್ಲಿ ಉಚ್ಚೆ ಹೊಯ್ಯುವುದನ್ನು ಬಿಡುವುದು. ಶೇಕಡ ೭೦-೮೦ ರಷ್ಟು ಮಕ್ಕಳು ಹೀಗೆ ಎರಡು-ಎರಡೂವರೆ ವರ್ಷ ವಯಸ್ಸಿಗೆ ಬರುವುದರಲ್ಲಿ ಹಾಸಿಗೆಯಲ್ಲಿ ಉಚ್ಚೆ ಹೊಯ್ದುಕೊಳ್ಳುವುದನ್ನು ಬಿಟ್ಟುಬಿಡುವುವು ; ಆದರೆ ಇನ್ನು ಕೆಲವು ಮಕ್ಕಳು ಕಾರಣಾಂತರದಿಂದ ಹೆಚ್ಚು ಕಾಲವನ್ನು ತೆಗೆದುಕೊಳ್ಳುವುವು.

ಕುಟುಂಬದಲ್ಲಿ ತಾನು ಒಂದು ವ್ಯಕ್ತಿ ಎಂಬ ಜ್ಞಾನವು ಇನ್ನೂ ಹೆಚ್ಚುವುದು. ಇತರರೊಡನೆ ಮಾತಾಡಿ ಅವರನ್ನು ನಗಿಸುವುದಕ್ಕೆ ಪ್ರಯತ್ನಿಸುವುದು. ತಾಯಿ ತಂದೆಗಳು ಹೇಳಿದ ಸಣ್ಣಪುಟ್ಟ ಕೆಲಸಗಳನ್ನು ಮಾಡುವುದು ತನ್ನನ್ನು ಯಾರಾದರೂ ಬಯ್ದರೆ ಕೋಪ ವ್ಯಸನಗಳನ್ನು ತಾಳುವುದು. ಹೊಗಳಿದರೆ ಸಂತೋಷ ಪಡುವುದು. ಬೆಳಗಿನ ಹೊತ್ತು ಅಕಸ್ಮಾತ್ತಾಗಿ ಮನೆಯೊಳಗೆ ಮರೆತು ಉಚ್ಚೆ ಹೊಯ್ದು ಅವಮಾನದಿಂದ ತಲೆಬಾಗಿಸುವುದು. ಅಲ್ಲಿ 'ಯಾರು ಉಚ್ಚೆ ಹೊಯ್ದರು?' ಎಂದು ಕೇಳಿದರೆ 'ನಾಯಿ' 'ಪಾಪ' ಎಂದು ಇತರರ ಹೆಸರನ್ನು ಹೇಳಿ ಅವರು ಹೊಯ್ದರೆಂದು ಹೇಳುವುದು.

ಗಂಡು ಮಗುವೇ ಆಗಲಿ, ಹೆಣ್ಣು ಮಗುವೇ ಆಗಲಿ, ಬೊಂಬೆಯನ್ನು ಹಿಡಿದು 'ಇದು ನನ್ನ ಮಗು' ಎಂದು ಹೇಳಿಕೊಂಡು ತಾಯಿ-ಮಗುವಿನ ಆಟವನ್ನು ಆಡುವುದು. ಆದರೆ ಸಾಧಾರಣ

ವಾಗಿ ಗಂಡು ಮಗು ಈ ಆಟವನ್ನು ಆಡಿದರೆ ಅದನ್ನು ಗದರಿಸಿ ನಿರುತ್ಸಾಹ ಗೊಳಿಸುವುದರಿಂದ ಕ್ರಮೇಣ ಈ ಆಟವನ್ನು ಬಿಟ್ಟುಬಿಡುವುದು. ಹೆಣ್ಣು ಮಕ್ಕಳನ್ನು ಪ್ರೋತ್ಸಾಹಿಸುವುದರಿಂದ ಈ ಬೊಂಬೆಯಾಟವು ಹೆಣ್ಣು ಮಕ್ಕಳಾಟವಾಗಿ ಪರಿಗಣಿಸಲ್ಪಟ್ಟಿರುವುದು.

## ಮೂರು ವರ್ಷಗಳಲ್ಲಿ

ಎರಡು ವರ್ಷ ವಯಸ್ಸಿನ ಮಗುವಿನಂತೆಯೇ ಮೂರು ವರ್ಷದ ಮಗುವೂ ವಿಧವಿಧವಾದ ದೇಹ ಚಲನದಲ್ಲಿ ಹೆಚ್ಚಾದ ಆಸಕ್ತಿಯನ್ನು ತೋರಿಸುವುದು. ಅಂತೆಯೇ, ಒಂದೇ ಕಡೆ ಕುಳಿತು ಆಡುವುದರಲ್ಲಿಯೂ ಇಷ್ಟವಿರುವುದು. ಈ ವಯಸ್ಸಿನಲ್ಲಿ ಮಗು ತನ್ನ ಆಟದಲ್ಲಿ ದೇಹವೆಲ್ಲವನ್ನೂ ಉಪಯೋಗಿಸದೆ ಕೈ ಬೆರಳುಗಳನ್ನು ಹೆಚ್ಚಾಗಿ ಉಪಯೋಗಿಸಲು ಇಚ್ಛೆವುಳ್ಳದ್ದಾಗಿರುವುದು, ಸೀಮೆ ಸುಣ್ಣ ಸೀಸದ ಕಡ್ಡಿಗಳು ಸಿಕ್ಕಿದರೆ, ನೆಲ ಗೋಡೆ ಕಾಗದಗಳ ಮೇಲೆ ಸಿಕ್ಕಾಬಟ್ಟೆ ಗೀಚುವುದೆಂದರೆ ಬಹಳ ಇಷ್ಟವಾದ ಕೆಲಸ. ಇತರ ಚಿತ್ರಗಳನ್ನೂ ಪದಾರ್ಥಗಳನ್ನೂ ಅನುಕರಿಸಿ ಬರೆಯಲಾರಂಭಿಸುವುದು. ಈಗ ಗೆರೆಗಳನ್ನು ಚೆನ್ನಾಗಿ ಎಳೆಯಬಲ್ಲುದು. ನಾನಾ ವಿಧವಾದ ಆಕೃತಿಯ ಗೆರೆಗಳನ್ನು ಬರೆಯಲಾರಂಭಿಸುವುದು. ಕೈ ಚಲನೆಯ ಮೇಲೆ ಹತೋಟಿ ಹೆಚ್ಚಿ ತನಗೆ ಇಷ್ಟಬಂದಂತೆ ಕೈಯನ್ನು ತಿರುಗಿಸಿ ಬರೆಯಬಲ್ಲುದು.

ಮರದ ತುಂಡುಗಳನ್ನು ಕೊಟ್ಟರೆ ಆರೇಳು ತುಂಡುಗಳನ್ನು ಒಂದರ ಮೇಲೊಂದನ್ನಿಟ್ಟು ಸ್ತಂಭವನ್ನು ಕಟ್ಟುವುದು. ಮರದ ತುಂಡುಗಳನ್ನು ಜೋಡಿಸುವುದರಲ್ಲಿ ಕುಶಲತೆಯನ್ನು ಪಡೆಯುವುದು. ಹನ್ನೆರಡು ತಿಂಗಳ ಮಗು ಒಂದು ಮರದ ತುಂಡಿನ ಮೇಲೆ ಮತ್ತೆ ಒಂದನ್ನು ಮಾತ್ರ ಇಡಬಲ್ಲುದೆಂದು ನೋಡಿರುವೆವು ; ಎರಡು ವರ್ಷದ ಮಗು ಮರದ ತುಂಡುಗಳನ್ನು ಸಾಲಾಗಿ ಒಂದರ ಮಗ್ಗುಲಲ್ಲಿ

ಮತ್ತೊಂದನ್ನಿಡುವುದು. ಹೀಗೆ ಮೇಲಿನಿಂದ ಕೆಳಗೆ ಎಂಬ ಭಾವನೆಯನ್ನು ಒಂದು ವರ್ಷದ ವಯಸ್ಸಿನಲ್ಲಿಯೇ ಪಡೆದಿದ್ದು 'ಅಡ್ಡಗಲ' ದ ಭಾವನೆಯನ್ನು ಎರಡನೆಯ ವರ್ಷದಲ್ಲಿ ಹೊಂದಿ, ಮೂರನೆಯ ವರ್ಷದಲ್ಲಿ ಈ ಎರಡು ಭಾವನೆಗಳ ಜೋಡಣೆಯಿಂದ ಮೂರು ಮರದ ತುಂಡುಗಳನ್ನು ತೆಗೆದುಕೊಂಡು ಅವುಗಳಿಂದ 'ಸೇತುವೆ' ಯನ್ನು ಕಟ್ಟುವುದು. ಈ ವಿಧವಾಗಿ ಮಗು ಬೆಳೆಯುತ್ತ ಬೆಳೆಯುತ್ತ ಪಕ್ವತೆಯನ್ನು ಹೊಂದುತ್ತಾ, ಹೆಚ್ಚುಹೆಚ್ಚಾಗಿ ತೊಡಕಾದ ಕೆಲಸಗಳನ್ನು ಮಾಡಲಾರಂಭಿಸುವುದು. ಕಾಲದ ಅವಧಿಗೆ ಮುಂಚೆಯೇ 'ಮಗು ಈ ಕೆಲಸವನ್ನು ಮಾಡಲಿಲ್ಲ ; ಆ ಕೆಲಸವನ್ನು ಮಾಡಲಾರದು' ಎಂದು ತಾಯಿಯು ಚಿಂತೆ, ಕೋಪ, ವ್ಯಸನ, ನಿರಾಶೆಗಳನ್ನು ತಾಳದೆ ಇರಬೇಕಾದುದು ಆವಶ್ಯಕವೆಂದು ಇದರಿಂದ ತಿಳಿದು ಬರುವುದು.

ಕಾಗದವನ್ನು ಕೊಟ್ಟರೆ ಈ ವಯಸ್ಸಿನಲ್ಲಿ ಮಗು ಅದನ್ನು ಅಡ್ಡಡ್ಡಲಾಗಿಯೂ ಮತ್ತೆ ಉದ್ದುದ್ದವಾಗಿಯೂ ನಾಲ್ಕು ಪದರಗಳಾಗಿ ಮಡಿಸುವುದು. ಆದರೆ ಇನ್ನೂ ಮೂಲೆಯಿಂದ ಮೂಲೆಗೆ ಮಡಿಸಲಾರದು. ಗೆರೆಯನ್ನು ಎಳೆಯುವುದರಲ್ಲಿಯೂ ಈ ನ್ಯೂನತೆಯು ಕಾಣಬರುವುದು. ಅಂದರೆ ಗೆರೆಯನ್ನು ಲಂಬವಾಗಿಯೂ ಅಡ್ಡವಾಗಿಯೂ ಬರೆಯಬಲ್ಲುದು, ಆದರೆ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಬರೆಯಲು ಇನ್ನೂ ಅರಿಯದು. ಮತ್ತು ಈ ಗೆರೆಗಳನ್ನು ಸೇರಿಸಿ ಶಿಲುಬೆಯ (+) ಆಕಾರದಲ್ಲಿ ತಾನೇ ಬರೆಯಲಾರದು.

ಮೂರು ವರ್ಷಗಳ ಮಗು ಕಾಲುಗಳ ಮೇಲೆ ಮತ್ತಷ್ಟು ಹತೋಟಿಯನ್ನು ಪಡೆದಿರುವುದು. ಈಗ ಚೆನ್ನಾಗಿ ಓಡಬಲ್ಲುದು ; ಓಡುತ್ತ ಓಡುತ್ತ ವೇಗವನ್ನು ಹೆಚ್ಚಿಸಿಕೊಳ್ಳಬಲ್ಲುದು ; ಕಡಮೆಮಾಡಿ

ಕೊಳ್ಳಲೂ ಬಲ್ಲುದು. ಎರಡು ವರ್ಷದ ಮಗುವಿಗೆ ಈ ರೀತಿ ಹಠಾತ್ತನೆ ಓಡುತ್ತಿರುವಾಗಲೇ ವೇಗವನ್ನು ಬದಲಾಯಿಸಲು ಆಗುತ್ತಿರಲಿಲ್ಲ. ಮೂರು ವರ್ಷದ ಮಗು ಕಡಿದಾದ ತಿರುವುಗಳಲ್ಲಿಯೂ ಓಡಬಲ್ಲುದು. ಈಗ ಮಗು ಯಾರ ಸಹಾಯವೂ ಇಲ್ಲದೆ, ಒಂದು ಕಾಲನ್ನು ಹಂತದ ಮೇಲೆಯೂ, ಮತ್ತೊಂದು ಕಾಲನ್ನು ಇನ್ನೊಂದು ಹಂತದ ಮೇಲೆಯೂ ಇಟ್ಟು ಹಂತಗಳನ್ನು ಹತ್ತಿ ಇಳಿಯಬಲ್ಲುದು. ಹನ್ನೆರಡು ಅಂಗುಲ ಎತ್ತರದಿಂದ ಕೆಳಕ್ಕೆ ಚೆನ್ನಾಗಿ ಹಾರಬಲ್ಲುದು. ಮೂರು ಚಕ್ರದ ಸೈಕಲ್‌ಗಾಡಿಯ ಮೇಲೆ ಕುಳಿತು ಪೆಡಲನ್ನು ತುಳಿದು ಸವಾರಿ ಮಾಡಬಲ್ಲುದು. ಕ್ಷಣಮಾತ್ರ ಒಂಟಿಗಾಲಿನಲ್ಲಿ ನಿಲ್ಲುವ ಸಾಮರ್ಥ್ಯವನ್ನು ಪಡೆದಿರುವುದು. ಈ ವಿಧವಾಗಿ ಮಗು ತನ್ನ ದೇಹವನ್ನು ಸಮತೂಕದಲ್ಲಿಡುವುದನ್ನು ಹೆಚ್ಚು ಹೆಚ್ಚಾಗಿ ಕಲಿಯುತ್ತ ಹೋಗುವುದು. ಅಂಗಗಳ ಮಾಂಸಖಂಡಗಳು ಬಲಗೊಂಡು ನರಮಂಡಲದ ಪಕ್ವತೆಯೂ ಹೆಚ್ಚಿ, ದೇಹದ ಮೇಲಿನ ಹತೋಟಿಯು ಮುಂದುವರಿಯುವುದು.

ಮಾನಸಿಕ ಬೆಳವಣಿಗೆಯೂ ಹೆಚ್ಚಿ ತನ್ನ ಕೆಲಸಗಳಲ್ಲಿ ಕುಶಲತೆಯನ್ನು ತೋರಿಸುವುದು. ನಾಲ್ಕು ಮರದ ತುಂಡುಗಳನ್ನು ಕೊಟ್ಟರೆ ಅವುಗಳನ್ನು ಜೋಡಿಸಿ ಒಂದು ಚೌಕವನ್ನು ರಚಿಸುವುದು. ತನ್ನ ಸಾಮಾನುಗಳನ್ನು ಅಚ್ಚುಕಟ್ಟಾಗಿ ಇಡಲು ಪ್ರಯತ್ನಿಸುವುದು, ಒಂದು ವ್ಯವಸ್ಥಿತ ರೂಪದಲ್ಲಿ ವಸ್ತುಗಳನ್ನಿಡುವುದರಲ್ಲಿಯೂ ಜೋಡಿಸುವುದರಲ್ಲಿಯೂ ಅಭಿರುಚಿಯನ್ನು ತೋರಿಸುವುದು. ಒಂದು ಚಿತ್ರಪಟವನ್ನು ಮಧ್ಯಕ್ಕೆ ಹರಿದು ಎರಡು ಭಾಗಗಳಾಗಿ ಮಾಡಿ ಬೇರೆ ಬೇರೆ ಇಟ್ಟರೆ ಅವೆರಡೂ ಒಂದೇ ರೂಪದ ಎರಡು ಭಾಗಗಳೆಂದು ಗುರುತಿಸಿ ಅವೆರಡನ್ನೂ ಸರಿಯಾಗಿ ಜೋಡಿಸಿ ರೂಪವನ್ನು ಕೊಡುವುದು. ಈ ವಿಧವಾಗಿ ಮಗುವಿನ ಊಹಾಶಕ್ತಿಯು ಬೆಳೆದಿರುವುದು.

ಎರಡು ವರ್ಷಗಳ ಮಗುವಿನ ಹಾಗೆಯೇ ಈಗಲೂ ತಾನು ಮಾಡುವ ಕೆಲಸದ ವಿಧಾನವು ಅನುಚಿತವಾದರೂ, ಅದರಿಂದ ಯಾವ ಲಾಭವೂ ಇಲ್ಲದೆ ಹೋದರೂ ಹಾಗೆ ಮಾಡುವುದನ್ನು ಬಿಟ್ಟು ಬೇರೆ ವಿಧದಲ್ಲಿ ಆ ಕೆಲಸವನ್ನು ಮಾಡಲು ಯತ್ನಿಸುವುದಿಲ್ಲ. ಈ ಕಾರಣ ದಿಂದಲೇ ಒಂದೂವರೆ ವರ್ಷದಿಂದ ಮೂರು ವರ್ಷದ ವರೆಗಿನ ವಯಸ್ಸಿನ ಮಕ್ಕಳು ಹಟಮಾರಿಗಳೆನಿಸುವರು. ತಮಗೆ ತಿಳಿಯುವುದಿಲ್ಲ ; ಇತರರು ಹೇಳುವುದನ್ನು ಕೇಳುವುದಿಲ್ಲ. ಇದು ತಾಯಿಯಲ್ಲಿ ಜುಗುಪ್ಸೆ ಕೋಪಗಳುಂಟಾಗಲು ಕಾರಣವಾಗುವುದು. ಆದರೆ ಮಗುವಿಗೆ ನಾಲ್ಕು ವರ್ಷಗಳು ಕಳೆದರೆ ಈ ವಿಧವಾದ ಅಪ್ರಯೋಜಕವಾದ ನಡೆವಳಿಕೆಯು ದೂರವಾಗಿ ಸಂದರ್ಭಕ್ಕೆ ಅನುಸಾರವಾಗಿ ನಡೆವಳಿಕೆಯ ರೀತಿಯನ್ನು ಬದಲಾಯಿಸಿಕೊಳ್ಳುವುದು.

ಈ ಮಗುವಿನ ಭಾಷಾಜ್ಞಾನವು ಬಹಳ ಮಟ್ಟಿಗೆ ಮುಂದುವರಿದಿರುವುದು. ಹದಿನೆಂಟು ತಿಂಗಳ ಮಗುವು ಅರ್ಥವಿಲ್ಲದ ಶಬ್ದಗಳನ್ನು ಮಾಡುತ್ತಿದ್ದು ಎರಡುವರ್ಷ ವಯಸ್ಸಿಗೆ ಕೆಲವು ಪದಗಳನ್ನು ಕಲಿತು, ಮೂರು ವರ್ಷಕ್ಕೆ ತನ್ನ ಯೋಚನೆಗಳನ್ನು ವಾಕ್ಯಗಳ ಮೂಲಕ ಹೊರಗೆಡವಲು ಸಾಮರ್ಥ್ಯವನ್ನು ಪಡೆಯುವುದು. ತನ್ನಷ್ಟಕ್ಕೆ ತಾನೆ ಮಾತನಾಡಿಕೊಳ್ಳುತ್ತಿರುವುದು. ಆಟಗಳನ್ನಾಡುವಾಗೆ ಮಾತುಗಳನ್ನಾಡುತ್ತಿರುವುದು. ಇತರರ ಕೆಲಸಗಳನ್ನು ಅನುಕರಿಸುವುದು. ಮೊಸರು ಮಾರುವುದು, ತರಕಾರಿ ಮಾರುವುದು, ಅಂಗಡಿಯಾಟ, ಆಸ್ಪತ್ರೆ ಆಟ ಮುಂತಾದ ಆಟಗಳನ್ನು ಅವುಗಳಿಗೆ ತಕ್ಕಂತೆ ಮಾತುಗಳನ್ನಾಡುತ್ತ ಆಡಿಕೊಳ್ಳುವುದು.

ಎರಡು ವರ್ಷಗಳ ಮಗು ಬರಿಯ ದೇಹಚಲನದ ಮೂಲಕವೇ ಆಡಿಕೊಳ್ಳುತ್ತಿರುವುದು. ಆದರೆ ಮೂರು ವರ್ಷದ ಮಗು ದೇಹಚಲನೆಯನ್ನು ಕಡಮೆ ಮಾಡಿಕೊಂಡು ಮಾತನಾಡುವುದನ್ನು

ಹೆಚ್ಚಿಸಿಕೊಂಡು ಆಡಿಕೊಳ್ಳುವುದು. ಇತರರಾಡುವ ಮಾತುಗಳನ್ನು ಗಮನವಿಟ್ಟು ಕೇಳುವುದು. ಮಾತುಗಳನ್ನು ಕೇಳಿ ಆ ಮೂಲಕ ವಿಷಯಗಳನ್ನು ಕಲಿಯುವುದು. ಆದುದರಿಂದಲೇ ಮಕ್ಕಳು ಈ ವಯಸ್ಸಿನಲ್ಲಿ ಹಿರಿಯರನ್ನು ಕುರಿತು ನಾನಾ ಪ್ರಶ್ನೆಗಳನ್ನು ಕೇಳುತ್ತಿರುವುದು. 'ಇದು ಏನು?' 'ಅದು ಎಲ್ಲಿ ಹೋಗುವುದು?' ಎಂಬಿವೇ ಮುಂತಾದ ಪ್ರಶ್ನೆಗಳನ್ನು ಪದೇ ಪದೇ ಹಾಕುತ್ತಿರುವುದು. ಈ ಪ್ರಶ್ನೋತ್ತರಗಳ ಮೂಲಕ ತನ್ನ ಅನುಭವಗಳನ್ನು ವರ್ಗೀಕರಣ ಮಾಡಲು ಆರಂಭಿಸುವುದು. ತಂದೆ ತಾಯಿಗಳು ಹೇಳಿದ ಮಾತಿಗೆ ಅನುಸಾರವಾಗಿ ತನ್ನ ಚಲನ ವಲನಗಳನ್ನು ಬದಲಾಯಿಸುವುದು. ಒಳಗೆ-ಹೊರಗೆ-ಕೆಳಗೆ-ಮೇಲೆ ಮುಂತಾದ ಸಂಬಂಧಾನ್ವಯಗಳನ್ನು ಅರ್ಥಮಾಡಿಕೊಳ್ಳುವುದು. ತಂದೆ ತಾಯಿಗಳು ಹೇಳಿದ ಅನೇಕ ಸಣ್ಣ ಪುಟ್ಟ ಕೆಲಸಗಳನ್ನು ಮಾಡಿ ಅವರ ಕೆಲಸದಲ್ಲಿ ನೆರವಾಗುವುದು.

ಎರಡು ವರ್ಷದ ಮಗು ತನಗೆ ಬೇಕಾದುದನ್ನು ಪಡೆಯಲು ಹಟಹಿಡಿಯುವುದು; ಆದರೆ ಮೂರು ವರ್ಷದ ಮಗು ಮುಂದೆ ತನಗೆ ಸಿಕ್ಕುವುದೆಂಬ ಭರವಸೆಯುಂಟಾದರೆ ಸಾಕು, ಸುಮ್ಮನಾಗುವುದು. ಇತರ ಮಕ್ಕಳ ಹತ್ತಿರವಿರುವ ಸಾಮಾನುಗಳನ್ನು ತಾನು ಪಡೆಯಲು ತನ್ನಲ್ಲಿರುವ ಸಾಮಾನುಗಳನ್ನು ಬದಲಾಗಿ ಕೊಡಬಲ್ಲುದು. ತನ್ನ ವ್ಯಕ್ತಿತ್ವದ ಅರಿವೂ ಇತರರ ವ್ಯಕ್ತಿತ್ವದ ಅರಿವೂ ಮುಂದುವರಿಯುವುವು. ಆದರೆ ಇನ್ನೂ ಸಾಮಾನುಗಳಿಗೂ ಮನುಷ್ಯರಿಗೂ ಇರುವ ವ್ಯತ್ಯಾಸಗಳು ಪೂರ್ಣವಾಗಿ ತಿಳಿದಿರುವುದಿಲ್ಲ. ಓಡುವಾಗ ಕುರ್ಚಿಗೆ ತಗುಲಿ ಪೆಟ್ಟು ಮಾಡಿಕೊಂಡರೆ ಕುರ್ಚಿಯನ್ನು ಬಯ್ಯಲೂ ಹೊಡೆಯಲೂ ತೊಡಗುವುದು. ಇದರ ಮೇಲಿನ ಕೋಪವು ಕ್ಷಣಿಕವಾದುದೇ ಹೊರತು ದೀರ್ಘಕಾಲ ಇರುವಂತಹ

ದಲ್ಲ. ಕೆಲವು ಸಮಯಗಳಲ್ಲಿ ಮಾತ್ರ ಹೊಟ್ಟೆಕಿಚ್ಚು ತಲೆದೋರಿ ತನಗೆ ಸಿಕ್ಕದಿದ್ದ ವಸ್ತುವು ಇತರರಿಗೆ ಸಿಕ್ಕಿದರೆ ಅಸೂಯೆಯಿಂದ ನೆಲದ ಮೇಲೆ ಬಿದ್ದು ಹೊರಳಾಡಿ ಕಿರಿಚುವುದು.

ಈ ವಯಸ್ಸಿಗೆ ಬರುವ ವರೆಗೆ, ಹಠಾತ್ತಾಗಿ ಒದಗುವ ಅಥವಾ ನೋವನ್ನುಂಟುಮಾಡುವ ಸಂಭವಗಳಿಂದ ಮಗುವಿಗೆ ಹೆದರಿಕೆಯುಂಟಾಗುತ್ತಿತ್ತು. ಆದರೆ ಎರಡೂವರೆ ಮೂರು ವರ್ಷಗಳ ವಯಸ್ಸಿನಲ್ಲಿ ಕೆಲವು ಅಪರೂಪದ ಸಾಮಾನುಗಳನ್ನೂ ವಿಕಾರವಾದ ಬೊಂಬೆಗಳನ್ನೂ ಕತ್ತಲನ್ನೂ ಕಂಡು ಹೆದರುವುದು. ಈ ಹೆದರಿಕೆಯು ಸ್ವಾಭಾವಿಕವಾದ ಹೆದರಿಕೆಯಲ್ಲ. ಹಿಂದೆ ತನಗೆ ನೋವುಂಟುಮಾಡಿದ ವಸ್ತುವನ್ನು ಕಂಡರೆ ಹೆದರುವುದು. ಇಷ್ಟೇ ಅಲ್ಲದೆ ಹಿಂದೆ ನೋವುಂಟುಮಾಡಿದ ವಸ್ತುವಿನ ಜೊತೆಯಲ್ಲಿದ್ದ ಇತರ ವಸ್ತುಗಳನ್ನು ಕಂಡರೂ, ನೋವುಂಟುಮಾಡಿದ ವಸ್ತುವನ್ನು ಹೋಲುವಂತಹ ಮತ್ಯಾವ ವಸ್ತುವನ್ನು ಕಂಡರೂ ಹೆದರಿಕೆಯುಂಟಾಗುವುದು. † ಹಠಾತ್ತಾಗಿ ಆಗುವ ದೊಡ್ಡ ಶಬ್ದಗಳನ್ನು ಕೇಳಿದರೆ ಮಗು ಹೆದರುವುದು. ಹೆದರಿಕೆಯಿಲ್ಲದೆ ನಾಯಿಯ ಜೊತೆಯಲ್ಲಿ ಆಡುತ್ತಿರುವ ಮಗು ನಾಯಿಯು ಅಕಸ್ಮಾತ್ತಾಗಿ ಬಗುಳಿ ಕಠೋರ ಶಬ್ದವನ್ನು ಮಾಡಿದರೆ ಆಗಿನಿಂದ ನಾಯಿಯನ್ನು ಕಂಡಾಗಲೆಲ್ಲ ಹೆದರುವುದು. ನಾಯಿಯನ್ನು ಹೋಲುವ ಬೊಂಬೆಯನ್ನು ಕಂಡರೂ, ನಾಯಿಯ ಮೈಯಂತಿರುವ ಉಣ್ಣೆಯ ಶಾಲನ್ನು ಕಂಡರೂ ಹೆದರುವುದು.

ಈ ವಯಸ್ಸಿನಲ್ಲಿ ಮಗುವಿನ ಸಾಮಾಜಿಕ ವರ್ತನೆಯು ಸ್ವಲ್ಪ ಮುಂದುವರಿಯುವುದು. ಮಗು ತಾನು ನಕ್ಕು ಇತರರನ್ನು ನಗಿಸು

---

† ಈ ರೀತಿಯ ಹೆದರಿಕೆಗಳಿಗೆ ಕಂಡೀಷನ್ಡ್ ಫಿಯರ್ಸ್ ಎಂದು ಹೆಸರು. ವಿವರಣೆಗೆ ಈ ಗ್ರಂಥಕರ್ತರ "ಮಕ್ಕಳ ಮನಸ್ಸು" ಎಂಬ ಗ್ರಂಥವನ್ನು ನೋಡಿ.




**ಮರದ ತುಂಡುಗಳ ಆಟದ ಬೆಳವಣಿಗೆ**

ವುದು. ಇತರ ಮುಖಭಾವನೆಗಳನ್ನು ಕಂಡು, ಅವುಗಳಿಗೆ ತಕ್ಕಂತೆ ನಟಿಸುವುದು. ಇತರ ಮಕ್ಕಳೊಂದಿಗೆ ಇರಬೇಕೆಂಬ ಬಯಕೆಯು ಹೆಚ್ಚುವುದು, ಆದರೂ ಬೇರೆ ಮಕ್ಕಳ ಜೊತೆಯಲ್ಲಿ ಸೇರಿ ಆಡಲು ಇನ್ನೂ ಒಂದೆರಡು ವರ್ಷಗಳು ಕಳೆಯಬೇಕು. ಈ ವಯಸ್ಸಿನ ಎರಡುಮೂರು ಮಕ್ಕಳು ಒಂದೇ ಕಡೆ ಇದ್ದರೂ ಒಬ್ಬೊಬ್ಬರೂ ತಮ್ಮಷ್ಟಕ್ಕೆ ತಾನೇ ಆಡಿಕೊಳ್ಳುತ್ತಿರುವರು ಇತರರ ಸಂಗವು ಕ್ಷಣಿಕವಾದುದು ಬೇರೆಯವರೊಡನೆ ಸಹಕರಿಸಿ ನಡೆದುಕೊಳ್ಳಲು ಇನ್ನೂ ಸ್ವಲ್ಪ ಕಾಲ ಕಳೆಯಬೇಕು.

ಮೂರು ವರ್ಷಗಳ ಮಗು ಮನೆಯಲ್ಲಿ ತನ್ನ ದಿನಚರಿಯನ್ನು ತಾನೇ ನಡಸಿಕೊಳ್ಳುವುದು.

ತಾನೇ ಊಟಮಾಡುವುದು ; ಪಾತ್ರೆಯಿಂದ ಲೋಟಕ್ಕೆ ನೀರನ್ನು ಸುರಿದುಕೊಂಡು ಕುಡಿಯುವುದು. ತಾನೇ ಬಟ್ಟೆಗಳನ್ನು ಹಾಕಿಕೊಳ್ಳ ಬಲ್ಲುದು, ತೆಗೆಯಲೂ ಬಲ್ಲುದು. ರಾತ್ರಿಯ ಹೊತ್ತು ಹಾಸಿಗೆಯಲ್ಲಿ ಉಚ್ಚೆ ಹೊಯ್ಯದೆ ಮಲಗುವುದು. ಬೆಳಗಿನ ಹೊತ್ತು ತನ್ನ ಜಲಮಲ ವಿಸರ್ಜನೆಗಳನ್ನು ತಾನೇ ಅಚ್ಚುಕಟ್ಟಾಗಿ ಮಾಡಿಕೊಳ್ಳು ವುದು. ತಾಯಿತಂದೆಗಳು ಹೇಳಿದ ಮಾತನ್ನು ಕೇಳಿ ಅದರಂತೆ ನಡೆಯಲು ಪ್ರಯತ್ನಿಸುವುದು. ಹಟಹಿಡಿದಾಗ ಬುದ್ಧಿವಾದವನ್ನು ಹೇಳಿದರೆ ಕೇಳುವುದು ; ಹಟವನ್ನು ಬಿಡುವುದು. ಇತರರ ಮೇಲೆ ಕೋಪ ಬಂದರೆ ಮೊದಲಿನಂತೆ ಹೊಡೆಯುವುದು, ಕಚ್ಚುವುದು ಮುಂತಾದ ಚೇಷ್ಟೆಗಳನ್ನು ಕಡಮೆಮಾಡಿ ಬೈದು ಮಾತನಾಡುವುದು. ಕೋಪವನ್ನು ಹೊರಸೂಸಲು ತನ್ನ ದೇಹದ ಅವಯವಗಳನ್ನು ಉಪಯೋಗಿಸುತ್ತಿದ್ದ ಮಗು ಈಗ ಭಾಷೆಯ ಮೂಲಕ ತನ್ನ ಕೋಪ ಅಸಮಾಧಾನಗಳನ್ನು ಹೊರಪಡಿಸುವುದು.



# ಅಧ್ಯಾಯ ೪.

## ನಾಲ್ಕು ಮತ್ತು ಐದನೆಯ ವರ್ಷಗಳು

ನಾಲ್ಕುವರ್ಷದ ಮಗು ಮೂರುವರ್ಷದ ಮಗುವಿಗಿಂತ ಬಹಳ ಆರಾಮದಿಂದ ಓಡಬಲ್ಲುದು. ವೇಗವಾಗಿ ಓಡುವಾಗ ಮುಗ್ಗರಿಸದೆ ನಿಲ್ಲಬಲ್ಲುದು. ನಿಂತ ಕಡೆಯಿಂದಲೂ ಓಡುತ್ತ ಓಡುತ್ತಲೂ ಮುಂದಕ್ಕೆ ಹಾರಬಲ್ಲುದು. ಈ ಕೆಲಸಗಳನ್ನು ಮೂರು ವರ್ಷದ ಮಗು ಮಾಡಲಾರದು. ಮೂರು ವರ್ಷದ ಮಗು ನಿಂತ ಕಡೆಯಿಂದಲೇ ಮೇಲಕ್ಕೆ ಹಾರಲೂ ಕೆಳಕ್ಕೆ ಧುಮುಕಲೂ ಬಲ್ಲುದೇ ಹೊರತು ಮುಂದಕ್ಕೆ ಹಾರಲಾರದು. ಕೈಯಿಂದ ಗೆರೆಯನ್ನು ಹೇಗೆ ಮೇಲಿಂದ ಕೆಳಕ್ಕೆ ಎಳೆಯುವುದನ್ನು ಚಿಕ್ಕವಯಸ್ಸಿನಲ್ಲಿಯೇ ಮಾಡಿ, ಸ್ವಲ್ಪ ವಯಸ್ಸು ಹೆಚ್ಚಿದ ಮೇಲೆ ಅಡ್ಡಡ್ಡಲಾಗಿ ಗೆರೆಯನ್ನು ಎಳೆಯುವ ಸಾಮರ್ಥ್ಯವನ್ನು ಪಡೆಯುವುದೋ ಅದೇ ರೀತಿ ಹಾರುವುದರಲ್ಲಿಯೂ ಈ ನಿಯಮವು ಕಂಡುಬರುವುದು.

ತನಗಿಂತ ದೊಡ್ಡ ಮಕ್ಕಳು ದಾರದ ಕುಣಿತ(ಸ್ಕಿಪಿಂಗ್)ವನ್ನಾಡುತ್ತಿದ್ದರೆ ನಾಲ್ಕು ವರ್ಷದ ಮಗು ದಾರವನ್ನು ತೆಗೆದುಕೊಂಡು ತಾನೂ ಕುಣಿಯಲು ಯತ್ನಿಸುವುದು. ಸುಮ್ಮನೆ ದಾರವನ್ನು ಮೇಲಿಂದ ಕೆಳಕ್ಕೆ ಬೀಸುತ್ತ ಕಾಲುಗಳನ್ನು ಎತ್ತಿ ಎತ್ತಿ ನೆಗೆಯುತ್ತಿರುವುದು. ಆದರೆ ದಾರವು ಮಾತ್ರ ಕಾಲಿನ ಕೆಳಗಡೆ ಹಾದು ಹೋಗುವುದಿಲ್ಲ. ನಾಲ್ಕುವರ್ಷದ ಮಗು ಮೂರು ವರ್ಷದ ಮಗುವಿಗಿಂತಲೂ ಹೆಚ್ಚುಕಾಲ ಒಂದು ಕಾಲಿನ ಮೇಲೆ ನಿಲ್ಲಬಲ್ಲುದು. ಇನ್ನು ಆರು ತಿಂಗಳನಂತರ ಒಂದು ಕಾಲಿನ ಮೇಲೆ ಕುಪ್ಪಳಿಸಲೂ ಬಲ್ಲು

ದು. ದೇಹವನ್ನು ಸಮತೋಲದಲ್ಲಿಡುವ ಸಾಮರ್ಥ್ಯವನ್ನು ಮೂರು ಅಂಗುಲ ಅಗಲದ ಹಲಗೆಯೊಂದರ ಮೇಲೆ ಕೆಳಗೆ ಬೀಳದೆ ನಡೆಯು ವುದರ ಮೂಲಕ ವ್ಯಕ್ತಪಡಿಸುವುದು.

ಈ ವಯಸ್ಸಿನಲ್ಲಿ ಮಗುವಿಗೆ ದೊಂಬರಾಟ ಆಡುವುದೆಂದರೆ ಬಹಳ ಇಷ್ಟ. ದಿಂಬಿನ ಮೇಲೆ ತಲೆಯನ್ನಿಟ್ಟು ಲಾಗ ಹಾಕಲು ಯತ್ನಿಸುವುದು ಕಾಲಿನ ಮಾಂಸಖಂಡಗಳ ಮೇಲೆ ಹತೋಟಿ ಹೆಚ್ಚಾಗುವುದರ ಮೂಲಕ ಈ ಆಟಗಳನ್ನಾಡಲು ಸಾಧ್ಯವಾಗು ವುದು. ಕಾಲುಗಳನ್ನು ಪ್ರತ್ಯೇಕವಾಗಿ, ಅಂದರೆ ದೇಹದ ಇತರ ಭಾಗಗಳನ್ನು ಅಲುಗಾಡಿಸದೆ, ಚಲಿಸುವುದನ್ನು ಮಾಡಬಲ್ಲುದು. ಬೆಳೆಯುತ್ತ ಬೆಳೆಯುತ್ತ ಅಂಗಾಂಗಗಳು ಪ್ರತ್ಯೇಕವಾಗಿ ಚಲಿಸುವ ಸಾಮರ್ಥ್ಯವನ್ನು ಪಡೆಯುವುವು. ಉದಾಹರಣೆ—ಎರಡು ಮೂರು ವರ್ಷಗಳ ಮಗು ಚೆಂಡನ್ನು ತೆಗೆದುಕೊಂಡು ಎಸೆಯಬೇಕಾದರೆ ಅಂಗೈಯನ್ನು ಮುಂದಕ್ಕೆ ಚಿಮ್ಮುವುದು; ಆದರೆ ನಾಲ್ಕು ವರ್ಷದ ಮಗು ಕೈಯನ್ನು ಮೇಲಕ್ಕೆ ಬೀಸಿ ಚೆಂಡನ್ನು ಎಸೆಯಬಲ್ಲುದು. ಕೈಬೆರಳುಗಳ ಮೇಲಿನ ಹತೋಟಿಯು ಮುಂದುವರಿದು ಸೂಕ್ಷ್ಮ ವಾದ ಕೆಲಸಗಳನ್ನು ಮಾಡಲು ಸಾಮರ್ಥ್ಯವನ್ನು ಪಡೆಯುವುದು. ಸೂಜಿ ದಾರಗಳಿಂದ ಮಣಿಗಳನ್ನು ಪೋಣಿಸಬಲ್ಲುದು. ಬೂಟ್ಸಿನ ದಾರವನ್ನು ಒಂದು ತೂತಿನಿಂದ ಮತ್ತೊಂದು ತೂತಿಗೆ ಹಾಕಿ ಎಳೆದು ಬಿಗಿ ಮಾಡಬಲ್ಲುದು. ತನ್ನ ಅಂಗಿಯ ಗುಂಡಿಗಳನ್ನು ಹಾಕಿಕೊಳ್ಳು ವುದು; ಬಿಚ್ಚುವುದು. ಸೀಮೆಸುಣ್ಣವನ್ನು ತೆಗೆದುಕೊಂಡು ಕಪ್ಪು ಹಲಗೆಯ ಮೇಲೆ ಚೆನ್ನಾಗಿ ಗೆರೆಗಳನ್ನು ಎಳೆಯಬಲ್ಲುದು. ಮೂರು ವರ್ಷದ ವಯಸ್ಸಿನಲ್ಲಿ ಗೋಳಾಕಾರವನ್ನು ಅನುಕರಿಸಿ ಬರೆಯುವಾಗ ಆಕಾರವು ಸರಿಯಾಗಿ ಬರುತ್ತಿರಲಿಲ್ಲ, ಆದರೆ ಈಗ ಆಕಾರವನ್ನು ಚೆನ್ನಾಗಿ ರಚಿಸಬಲ್ಲುದು, ಗೋಳಾಕಾರವನ್ನು ಬರೆಯುವಾಗ

ಎಡಗಡೆಯಿಂದ ಪ್ರಾರಂಭಿಸಿ ಪ್ರದಕ್ಷಿಣಾಕಾರದಲ್ಲಿ ಎಳೆದು ಮುಗಿಸುವುದು. ಇದೇ ಮಗುವಿನ ಬಲಗೈಯ ಪ್ರಾಮುಖ್ಯತೆಯ ಸೂಚನೆ ಮೊದಲ ಎರಡು ವರ್ಷಗಳಲ್ಲಿ ಕೆಲಸಗಳನ್ನೆಲ್ಲಾ ಎರಡು ಕೈಗಳಿಂದಲೂ ಮಾಡುತ್ತಿರುವುದು. ಎರಡು ಕೈಗಳಿಗೂ ಯಾವ ವ್ಯತ್ಯಾಸವನ್ನೂ ತೋರುವುದಿಲ್ಲ; ಆಮೇಲೆ ಬೆಳೆಯುತ್ತ ಬೆಳೆಯುತ್ತ ಮೂರು ವರ್ಷ ವಯಸ್ಸಿಗೆ ಬರುವಷ್ಟರಲ್ಲಿ ಬಲಗೈಯ ಪ್ರಾಮುಖ್ಯತೆಯು ಹೆಚ್ಚುವುದು. ಎಡಗೈಯ ಕುಶಲತೆಯು ಹಿಂದುಳಿಯುವುದು.

| | | | |
|---|---|---|---|
| 18 30ಗಳು | 2 ವರ್ಷ | 4 ವರ್ಷ | 5 ವರ್ಷ |
| 4ವರ್ಷ | 5 ವರ್ಷ | 5 ವರ್ಷ | 6 ವರ್ಷ |

**ಆಕೃತಿರಚನೆಯ ಬೆಳವಣಿಗೆ**

ಮೂರು ವರ್ಷಗಳೊಳಗೆ ಮಗು ಮೇಲಿಂದ ಕೆಳಕ್ಕೆ ಮತ್ತು ಅಡ್ಡಡ್ಡಲಾಗಿ ಗೀರು ಎಳೆಯುವುದನ್ನೂ, ಕಾಗದ ಮಡಿಸುವುದನ್ನೂ ಮಾಡಬಲ್ಲುದೆಂಬುದನ್ನು ನೋಡಿರುವೆವಷ್ಟೆ. ನಾಲ್ಕು ವರ್ಷಗಳ ಮಗು ಎರಡು ಗೀರುಗಳನ್ನು ಸೇರಿಸಿ ಶಿಲುಬೆಯ (+) ಆಕಾರವನ್ನು ಬರೆಯುವುದು. ಆದರೆ ಮೂಲೆಯಿಂದ ಮೂಲೆಗೆ ಬರೆಯಲು ಇನ್ನೂ ಸಾಮರ್ಥ್ಯವಿರುವುದಿಲ್ಲವಾದುದರಿಂದ ವಜ್ರಾಕೃತಿಯನ್ನು ಅನುಕರಿಸಿ ಬರೆಯಲಾರದು. ಚೌಕಾಕಾರದ ಕಾಗದವನ್ನು ಮೊದಲು ಮೇಲಿನಿಂದ ಕೆಳಕ್ಕೆ ಮಡಿಸಿ, ಅನಂತರ ಅಡ್ಡಡ್ಡಲಾಗಿ ಮಡಿಸಿ, ಕಡೆಗೆ

ಮೂಲೆಯಿಂದ ಮೂಲೆಗೆ ಮಡಿಸಿ ತೋರಿಸಿದರೆ, ಮಗು ಅದರಂತೆ ಮಡಿಸುವುದನ್ನು ಅನುಕರಿಸುವುದು.

ಈ ವಯಸ್ಸಿನಲ್ಲಿ ಮಗು ನಾನಾ ಪ್ರಶ್ನೆಗಳನ್ನು ಕೇಳಿ ಪ್ರಕೃತಿಯ ಹಾಗೂ ಸಾಮಾಜಿಕ ಜ್ಞಾನವನ್ನು ವರ್ಗೀಕರಣ ಮಾಡಲಾರಂಭಿಸುವುದು. ಒಂದರಿಂದ ನಾಲ್ಕರ ವರೆಗೂ ಎಣಿಸುವುದನ್ನು ಕಲಿತಿದ್ದರೂ ಪದಾರ್ಥಗಳನ್ನು ಎಣಿಸುವಾಗ 'ಒಂದು, ಎರಡು, ಬಹಳ' ಎಂದು ಎಣಿಸುವುದು.

ಈಗ ಕಲ್ಪನಾ ಶಕ್ತಿಯು ಮುಂದುವರಿದು ಕಾಲ್ಪನಿಕ ಜೊತೆಗಾರನೊಡನೆ ಮಗು ಆಡುವುದು ಮತ್ತು ಮಾತನಾಡುವುದು. ಆದುದರಿಂದಲೇ ಈ ವಯಸ್ಸಿನಲ್ಲಿ ತನ್ನ ಆಟಿಕೆಗಳನ್ನು ಒಂದು ಮೂಲೆಯಲ್ಲಿಟ್ಟುಕೊಂಡು ಒಂದು ಕಾಲ್ಪನಿಕ ವ್ಯಕ್ತಿಯೊಡನೆ ಮಾತನಾಡುವುದೇ ಅಲ್ಲದೆ ಒಂದೊಂದು ವೇಳೆ ಜಗಳವನ್ನೂ ಆಡುವುದು. ಈ ವಯಸ್ಸಿನಲ್ಲಿಯೇ ಮಕ್ಕಳು ಅಂಗಿ ಪೇಟ ಹಾಕಿಕೊಂಡು ಕಛೇರಿಗೆ ಹೋಗುವೆನೆಂದು ಹೊರಡುವುದು, ಅಥವಾ ಪುಸ್ತಕವನ್ನು ತೆಗೆದುಕೊಂಡು ಅಣ್ಣನ ಹಾಗೆ ತಾನೂ ಶಾಲೆಗೆ ಹೋಗುವೆನೆಂದು ಹೊರಡುವುದು. ಹೀಗೆ ಇತರರ ದಿನಚರಿಯನ್ನು ಅನುಸರಿಸಿ ನಟನೆಮಾಡುವುದು.

ಎರಡು ಗೀರುಗಳನ್ನು ತೋರಿಸಿದರೆ 'ಇದು ಉದ್ದವಾಗಿದೆ' 'ಇದು ತುಂಡಾಗಿದೆ' ಎಂದು ಹೇಳುವುದೇ ಹೊರತು ಉದ್ದ ತುಂಡು ಎಂಬ ಎರಡು ನಿರ್ಣಯಗಳನ್ನು ಕೂಡಿಸಿ 'ಇದಕ್ಕಿಂತ ಅದು ಉದ್ದ' 'ಅದಕ್ಕಿಂತ ಇದು ತುಂಡು' ಎಂದು ಹೇಳಲಾರದು. ಎರಡು ಚಿತ್ರಗಳನ್ನು ತೋರಿಸಿದರೆ 'ಈ ಚಿತ್ರ ಚೆನ್ನಾಗಿದೆ' 'ಈ ಚಿತ್ರ ಚೆನ್ನಾಗಿಲ್ಲ' ಎಂದು ಹೇಳುವುದೇ ಹೊರತು 'ಇದಕ್ಕಿಂತ ಅದು ಚೆನ್ನಾಗಿದೆ' ಎಂದು ಹೇಳಲಾರದು. ಮಾತುಗಳನ್ನು ಅಕ್ಷರಶಃ ಅರ್ಥಮಾಡಿಕೊಳ್ಳುವುದು. ಉಪಮಾನ ಉಪ

ಮೇಯಗಳ ಗೂಢಾರ್ಥಗಳನ್ನು ಅರಿಯುವ ಶಕ್ತಿಯನ್ನು ಪಡೆದಿರುವುದಿಲ್ಲ. ಆದಕಾರಣ ಕಟ್ಟುಕತೆಗಳನ್ನು ನಿಜವೆಂದೇ ಭಾವಿಸುವುದು ಮತ್ತು ಕತೆಗಳನ್ನು ಕೇಳುವಾಗ ಮುಖ ಕೈ ಮೊದಲಾದ ಅಂಗಗಳನ್ನು ಚಲಿಸಿ ನಟನೆಮಾಡುವುದು. ಕತೆಯ ಅಂಶಕ್ಕೆ ತಕ್ಕಹಾಗೆ ಕೈಕಾಲುಗಳನ್ನು ಅಲುಗಿಸಿ ಮುಖಭಾವನೆಯನ್ನೂ, ದೇಹಭಂಗಿಯನ್ನೂ ಬದಲಾಯಿಸುವುದು.

ಪದಾರ್ಥಗಳ ಚಿತ್ರಗಳನ್ನು ಬರೆಯಲು ಆರಂಭಿಸುವುದು. ಆದರೆ ಈ ಚಿತ್ರಗಳು ಆಕಾರದ ಕೆಲವು ಚಿಹ್ನೆಗಳನ್ನು ಮಾತ್ರ ಒಳಗೊಂಡಿರುವುವು. ಮನುಷ್ಯನ ಚಿತ್ರವನ್ನು ಬರೆಯ ಹೇಳಿದರೆ ಒಂದು ಡೊಂಕು ಡೊಂಕಾದ ವೃತ್ತವನ್ನು ಬರೆದು ಪಕ್ಕದಲ್ಲಿ ಎರಡು ಗೀರುಗಳನ್ನು ಬರೆದು ಆ ಮೂಲಕ ಕೈಗಳನ್ನು ಸೂಚಿಸುವುದು. ಕೆಲವು ವೇಳೆ ಎರಡು ಚುಕ್ಕಿಗಳನ್ನಿಟ್ಟು ಕಣ್ಣುಗಳನ್ನು ಸೂಚಿಸುವುದೂ ಉಂಟು. ಆದರೆ ಅಪೂರ್ಣವಾದ ಮನುಷ್ಯನ ಚಿತ್ರವೊಂದನ್ನು ಕೊಟ್ಟರೆ ಅದನ್ನು ಪೂರ್ಣಮಾಡಲು ಆವಶ್ಯಕವಾದ ಕಣ್ಣನ್ನೋ ಕಾಲನ್ನೋ ಬರೆಯುವುದು. ಕಣ್ಣನ್ನು ಸೂಚಿಸಲು ಚುಕ್ಕಿಹಾಕಿ 'ಈಗ ಅವನು ನೋಡಬಲ್ಲನು' ಎಂದು ಹೇಳುವುದು. ಘನಾಕೃತಿಯ ಮರದ ತುಂಡುಗಳನ್ನು ಕೊಟ್ಟರೆ ಅವುಗಳಿಂದ ಮನೆ, ಗೋಪುರ, ಶಾಲೆ ಮುಂತಾದ ಅನೇಕ ಮಾದರಿಗಳನ್ನು ಕಟ್ಟುವುದು. ಅವುಗಳಿಗೆ ಹೆಸರನ್ನಿಡುವುದು. ಇತರ ಮಕ್ಕಳ ಜೊತೆಯಲ್ಲಿ ಆಡುತ್ತಿರುವಾಗ ಈ ಕಟ್ಟಿರುವ ಮಾದರಿಯನ್ನು ಆಟದ ಒಂದು ಅಂಗವಾಗಿ ಮಾಡಿಕೊಳ್ಳುವುದು. ಮನೆಯ ಮಾದರಿಯನ್ನು ಕಟ್ಟಿ ಅದನ್ನು ತೋರಿಸಿ ಜೊತೆಯವನನ್ನು 'ನಮ್ಮ ಮನೆಗೆ ಹೋಗೋಣ ಬಾ' ಎಂದು ಕರೆಯುವುದು.

ನಾಲ್ಕುವರ್ಷದ ಮಗು ಪ್ರಶ್ನೆಗಳನ್ನು ಹಾಕಿ ತಂದೆತಾಯಿಗಳನ್ನು ಪೀಡಿಸುವುದು. ಸದಾ ಪ್ರಶ್ನಿಸುತ್ತಿರುವುದು. ಈ ಪ್ರಶ್ನೆಗಳ ಮೂಲಕ ತನ್ನ ಅರಿವನ್ನು ಹೆಚ್ಚಿಸಿಕೊಳ್ಳುವುದು; ತನ್ನ ಅನುಭವಗಳನ್ನು ವರ್ಗೀಕರಣ ಮಾಡಿಕೊಂಡು ಒಂದು ವಸ್ತುವಿಗೂ ಮತ್ತೊಂದು ವಸ್ತುವಿಗೂ ಇರುವ ಸಂಬಂಧಗಳನ್ನು ತಿಳಿದುಕೊಳ್ಳುವುದು. ಯಾವಾಗಲೂ ಮಾತನಾಡುತ್ತ ಮಾತುಗಳ ಉಚ್ಚಾರಣೆಯನ್ನು ಉತ್ತಮಪಡಿಸಿಕೊಳ್ಳುವುದು, ಮತ್ತು ಈ ಮಾತುಗಳ ಮೂಲಕ ತಂದೆತಾಯಿಗಳ ಗಮನವನ್ನು ತನ್ನ ಕಡೆಗೆ ಸೆಳೆಯಲು ಯತ್ನಿಸುವುದು ಯಾರು ಯಾವ ಕೆಲಸವನ್ನು ಮಾಡುತ್ತಿದ್ದರೂ ತನ್ನ ಜೊತೆಯಲ್ಲಿ ಅವರು ಮಾತನಾಡಬೇಕೆಂದು ಮಗು ಬಯಸುವುದು. 'ಇದು ಏತಕ್ಕೆ' 'ಅದು ಹೇಗೆ?' ಎಂಬ ಪ್ರಶ್ನೆಗಳೇ ಹೆಚ್ಚು, ಮೂರು ವರ್ಷ ವಯಸ್ಸಿನಲ್ಲಿ 'ಇದು ಏನು?' ಎಂಬ ಪ್ರಶ್ನೆಯನ್ನು ಮಾತ್ರ ಕೇಳುತ್ತಿತ್ತು. ಇದುವರೆಗೂ ನಾಮವಾಚಕಗಳನ್ನೇ ಹೆಚ್ಚಾಗಿ ಉಪಯೋಗಿಸುತ್ತಿದ್ದ ಮಗು ಇನ್ನು ಮೇಲೆ ಇತರ ವಾಚಕಗಳನ್ನೂ ಉಪಯೋಗಿಸಲಾರಂಭಿಸುವುದು.

ಈ ವಯಸ್ಸಿನ ಮಗುವಿಗೆ ಒಂದು ಕಡೆ ಸ್ವಾತಂತ್ರ್ಯವು ಹೆಚ್ಚುವುದು; ಇನ್ನೊಂದು ಕಡೆ ಸಹವಾಸ ಮಾಡಬೇಕೆಂಬ ಬಯಕೆಯು ಮುಂದುವರಿಯುವುದು. ತನ್ನ ದಿನಚರಿಯಲ್ಲಿ ಸ್ವಾತಂತ್ರ್ಯ ಪಡೆದು ತನ್ನ ಕೆಲಸಗಳನ್ನೆಲ್ಲ ತಾನೇ ಮಾಡಿಕೊಳ್ಳುವುದು. ತಾನು ಮಾಡುವ ಕೆಲಸಗಳಲ್ಲಿ ಹೆಚ್ಚಾಗಿ ಆಸಕ್ತಿಯನ್ನು ತೋರಿಸಿ ಕೆಲಸವು ಮುಗಿಯುವವರೆಗೂ ಮುಂದುವರಿಸುವುದು. ಈ ವಯಸ್ಸಿನ ಮಕ್ಕಳು ಇತರರು ಸ್ನಾನ ಮಾಡುತ್ತಿರುವಾಗ, ತಮ್ಮ ಹೊಸದೊಂದು ಕುತೂಹಲವನ್ನು ಪೂರೈಸಿಕೊಳ್ಳಲು, ಇಣಿಕಿ ನೋಡುವರು.

ಮೂರು ವರ್ಷದ ಮಕ್ಕಳು ಇತರರ ಜೊತೆಯಲ್ಲಿದ್ದರೂ ಅವರೊಡನೆ ಸೇರಿ ಆಡಿಕೊಳ್ಳುವುದು ವಿರಳ. ಒಂದೊಂದು ಮಗುವೂ ಬೇರೆಬೇರೆಯಾಗಿಯೇ ಆಡಿಕೊಳ್ಳುತ್ತಿರುವುದು. ಆಗಾಗ್ಗೆ ಬೇರೆ ಮಗುವಿನೊಡನೆ ಒಂದೆರಡು ಮಾತುಗಳನ್ನಾಡುವುದು. ನಾಲ್ಕು ವರ್ಷ ವಯಸ್ಸಿನ ಮಕ್ಕಳಲ್ಲಿ ಹೀಗೆ ಬೇರೆಬೇರೆಯಾಗಿ ಆಡಿಕೊಳ್ಳುವ ಇಚ್ಛೆ ಕಡಮೆಯಾಗಿ ಇತರರನ್ನು ಕೂಡಿ ಗುಂಪಿನ ಆಟಗಳನ್ನಾಡುವ ಬಯಕೆ ಹೆಚ್ಚುವುದು; ಮತ್ತು ಆಟದಲ್ಲಿ ತನ್ನ ಸರದಿಗಾಗಿ ಕಾಯುವುದನ್ನು ಕಲಿಯುವುದು. ತನ್ನ ಹತ್ತಿರದಲ್ಲಿರುವ ತಿಂಡಿ ಮತ್ತು ಇತರ ಪದಾರ್ಥಗಳನ್ನು ಜೊತೆಯವರಿಗೆ ಹಂಚಿ ಕೊಡುವುದನ್ನು ಕಲಿಯಲಾರಂಭಿಸುವುದು. ಸಮಾಜದ ಉನ್ನತಿಗೂ, ಸಂಸ್ಕೃತಿಯ ಬೆಳೆವಣಿಗೆಗೂ ಅತ್ಯಾವಶ್ಯಕವಾದ ಈ ಗುಣಗಳು ಮಕ್ಕಳು ಬೆಳೆದು ದೊಡ್ಡವರಾದ ಮೇಲೆ ಅಳಿಸಿಹೋಗುವುವು. ಇದೇ ಸಮಾಜದ ಹೀನತೆಗೆ ಕಾರಣವಾಗುವುದು.

ನಡೆದ ಘಟನೆಗಳನ್ನು ಕುರಿತು ವಿವರಿಸುವಾಗ ಮಗು ನಡೆದುದರ ಜೊತೆಯಲ್ಲಿ ತನ್ನ ಬಯಕೆ ಊಹೆಗಳನ್ನೂ ವರ್ಣಿಸುವುದು. ಇದೇ ಈ ವಯಸ್ಸಿನಲ್ಲಿ ಮಕ್ಕಳ 'ಸುಳ್ಳು' ಗಳಿಗೆ ಕಾರಣ. ಇವು ಸುಳ್ಳುಗಳಲ್ಲ; ಈ ವಯಸ್ಸಿನಲ್ಲಿ ಯಾವುದು ವಾಸ್ತವ, ಯಾವುದು ಇಚ್ಛೆಗಳ ಆಧಾರದ ಮೇಲೆ ನಿಂತಿರುವ ಕಲ್ಪನೆ ಎನ್ನುವ ತಾರತಮ್ಯಗಳ ತಿಳಿವಳಿಕೆ ಬಂದಿರುವುದಿಲ್ಲ. ಇನ್ನು ಒಂದೆರಡು ವರ್ಷ ಕಳೆಯುವುದರೊಳಗಾಗಿ ಈ ಎರಡರ ತಾರತಮ್ಯವನ್ನು ಚೆನ್ನಾಗಿ ಮಂದಟ್ಟು ಮಾಡಿಕೊಂಡನಂತರ ಆ 'ಸುಳ್ಳು' ಗಳನ್ನು ತಾನೇ ಬಿಟ್ಟುಬಿಡುವುದು.

**ಐದು ವರ್ಷಗಳಲ್ಲಿ :**—ಐದು ವರ್ಷ ವಯಸ್ಸಿನ ಮಕ್ಕಳು ಹೆಚ್ಚು ಸ್ವಾತಂತ್ರ್ಯವನ್ನು ಪಡೆದಿರುವರು. ತಾಯಿಯ ಮೇಲಿನ ಅವ

ಲಂಬನ ಬಹಳ ಮಟ್ಟಿಗೆ ಕಡಮೆಯಾಗಿ ಮಗು ತನ್ನ ಕೆಲಸಗಳನ್ನೆಲ್ಲಾ ತಾನೇ ಮಾಡಿಕೊಳ್ಳುವುದು. ಪ್ರಕೃತಿಯ ಜ್ಞಾನವೂ ಸಮಾಜ ಸಂಬಂಧಗಳ ಜ್ಞಾನವೂ ಬಹಳ ಮಟ್ಟಿಗೆ ಹೆಚ್ಚಿ ಮಗು ಒಂದು ಪಕ್ವತೆಯನ್ನು ಪಡೆದಿರುವುದು. ತನ್ನ ವ್ಯಕ್ತಿತ್ವದ ಅರಿವನ್ನು ತಾನಿರುವ ಪ್ರಪಂಚದ ವಿಷಯಗಳ ತಿಳಿವಳಿಕೆಯನ್ನೂ ತಕ್ಕ ಮಟ್ಟಿಗೆ ಪಡೆದಿರುವುದು. ಆದರೆ ಇನ್ನೂ ಓದುಬರೆಹಗಳೂ ಗಣಿತ ಜ್ಞಾನವೂ ಬಂದಿರುವುದಿಲ್ಲ; ಇವು ಬರಲು ಇನ್ನೂ ಒಂದು ವರ್ಷವಾದರೂ ಬೇಕು.

ನಾಲ್ಕು ವರ್ಷದ ಮಗುವಿಗಿಂತಲೂ ಈಗ ಮಗು ಚಲನವಲನಗಳಲ್ಲಿ ಹೆಚ್ಚು ಚತುರತೆಯನ್ನು ಪಡೆದಿರುವುದು. ದೇಹದ ಸಮತೂಕದ ಮೇಲೆ ಹೆಚ್ಚು ಸ್ವಾಧೀನವನ್ನು ಪಡೆದು ಬೀಳುವ ಹೆದರಿಕೆ ಇಲ್ಲದೆ ಮೈದಾನದಲ್ಲಿ ಚೆನ್ನಾಗಿ ಓಡಾಡಿ ಗುಂಪಿನ ಚೆಂಡಾಟಗಳಲ್ಲಿ ಸಹ ಸೇರಬಲ್ಲುದು. ‘ಹಗ್ಗದ ಕುಣಿತ’ ವನ್ನು ಈಗ ಸರಿಯಾಗಿ ಆಡಬಲ್ಲುದು. ತನ್ನ ಮುಂಗಾಲಿನ ಮೇಲೆ ಒಂದೆರಡು ಕ್ಷಣ ನಿಂತು ದೇಹವನ್ನು ಸಮತೂಕದಲ್ಲಿ ಇಡಬಲ್ಲುದು. ಈ ಚತುರತೆಗಳನ್ನೆಲ್ಲಾ ಪಡೆದಿರುವುದರಿಂದಲೇ ಈ ವಯಸ್ಸಿನ ಮಗು ನೃತ್ಯವನ್ನೂ ಕವಾಯಿತ(ಡ್ರಿಲ್)ನ್ನೂ ಕಲಿಯಬಲ್ಲುದು. ಬಾಚಣಿಗೆ, ಪೆನ್ಸಿಲ್, ಸೀಮೆಸುಣ್ಣ, ಹಲ್ಲುಜ್ಜುವ ಕಡ್ಡಿ, ಮುಂತಾದ ಸಲಕರಣೆಗಳನ್ನು ದಕ್ಷತೆಯಿಂದ ಉಪಯೋಗಿಸಬಲ್ಲುದು. ಕತ್ತರಿ ಹಿಡಿದು ಕಾಗದವನ್ನು ಕತ್ತರಿಸಬಲ್ಲುದು. ಗೆರೆಗಳನ್ನು ಮೂಲೆಯಿಂದ ಮೂಲೆಗೂ ಎಳೆಯುವ ಸಾಮರ್ಥ್ಯವನ್ನು ಪಡೆಯುವುದು. ಆದುದರಿಂದ ತ್ರಿಕೋಣಾಕಾರವನ್ನು ನೋಡಿ ಸುಲಭವಾಗಿ ಬರೆಯಬಲ್ಲುದು. ಚದರವನ್ನೂ ಬರೆಯಬಲ್ಲುದು. ಆದರೆ ವಜ್ರಾಕೃತಿಯನ್ನು ಮಾತ್ರ ಇನ್ನೂ ಹಳ ಕಷ್ಟದಿಂದಲೇ ಅನುಕರಿಸುವುದು. ಮನುಷ್ಯಾಕಾರವನ್ನು,

ಸಾಧಾರಣವಾಗಿ ಗುರುತಿಸುವ ಹಾಗೆ ಇರುವಂತೆ, ರಚಿಸಬಲ್ಲುದು. ಈ ವಯಸ್ಸಿನಲ್ಲಿ, ತಟ್ಟೆಗಳನ್ನು ತೊಳೆಯುವುದರಲ್ಲಿ ಅಡಿಗೆಮನೆಯ ಸಣ್ಣ ಪುಟ್ಟ ಕೆಲಸಗಳನ್ನು ಮಾಡುವುದರಲ್ಲಿ ಅಭಿಲಾಷೆಯನ್ನು ತೋರಿಸಿ ಆ ಕೆಲಸಗಳನ್ನು ಕಲಿಯುವುದು,

ಆಕೃತಿಗಳ ಜ್ಞಾನ ಬಹಳ ಮಟ್ಟಿಗೆ ಹೆಚ್ಚಿರುವುದು. ಗೊಡ್ಡಾರ್ಡ್ ಆಕೃತಿ ಹಲಗೆ † ಯಲ್ಲಿರುವ ಐದು ಆಕಾರಗಳನ್ನು ಜೋಡಿಸಬಲ್ಲುದು. ಒಂದು ಆಯಾಕಾರದ ರಟ್ಟನ್ನು ಮೂಲೆಯಿಂದ ಮೂಲೆಗೆ ಮಧ್ಯೆ ಸೀಳಿ ಆ ಎರಡು ಭಾಗಗಳನ್ನು ಕೊಟ್ಟರೆ, ಈ ತ್ರಿಕೋಣಗಳೆರಡನ್ನೂ ಜೋಡಿಸಿ ಮತ್ತೆ ಆಯಾಕಾರವನ್ನು ರಚಿಸಬಲ್ಲುದು. ಅಡಕ ಪಾತ್ರೆಯಂತಿರುವ ನಾಲ್ಕಾರು ಮರದ ಪೆಟ್ಟಿಗೆಗಳನ್ನು ಕೊಟ್ಟರೆ ಅವುಗಳನ್ನು ಒಂದರೊಳಗೆ ಮತ್ತೊಂದನ್ನು ಕ್ರಮವಾಗಿ ಜೋಡಿಸಬಲ್ಲುದು. ಈ ವಿಧವಾಗಿ ಆಕಾರ, ಗಾತ್ರ, ಕ್ರಮ ಮುಂತಾದುವುಗಳ ಜ್ಞಾನವು ಮುಂದುವರಿದಿರುವುದು. ತನ್ನ ಆಟ ಮುಗಿದ ಮೇಲೆ ಆಟಿಗೆಗಳನ್ನು ಒಂದು ಕಡೆ ಜೋಪಾನವಾಗಿಟ್ಟು ಅನಂತರ ಬೇರೆ ಕೆಲಸಗಳನ್ನು ಮಾಡಲು ಹೊರಡುವುದು. ಮಗು ಸಿಕ್ಕಾಬಟ್ಟೆ ತನ್ನ ಸಾಮಾನುಗಳನ್ನು ಬಿಸಾಡಿದ್ದರೆ, ಅದು ಮಗು ತಿಳಿವಳಿಕೆಯಿಲ್ಲದೆ ಮಾಡಿರುವ ಕೆಲಸವಲ್ಲ; ತಂದೆ ತಾಯಿಗಳು ಈ ತಿಳಿವಳಿಕೆಯನ್ನು ಪ್ರೋತ್ಸಾಹಿಸದೆ ಉದಾಸೀನತೆಯಿಂದ 'ಪಾಪ ಚಿಕ್ಕ ಮಗು, ಇನ್ನೂ ಇದೆಲ್ಲಾ ಗೊತ್ತಿಲ್ಲ; ಬೆಳೆದ ಮೇಲೆ ಗೊತ್ತುಮಾಡಿಕೊಳ್ಳುವುದು' ಎಂದು ತಾವೇ ಮಗುವಿಗೆ ದುರಭ್ಯಾಸಗಳನ್ನು ಕಲಿಸು

---

† ಈ ಹಲಗೆಯಲ್ಲಿ ಆಯ, ವೃತ್ತ, ಅರ್ಧವೃತ್ತ, ತ್ರಿಕೋಣ ಮತ್ತು ಶಿಲುಬೆ ಈ ಆಕಾರಗಳಲ್ಲಿ ಹಳ್ಳಗಳನ್ನು ಕೆತ್ತಿ ಅದೇ ಆಕಾರದ ಮತ್ತು ಗಾತ್ರದ ಮರದ ತುಂಡುಗಳನ್ನು ತಯಾರಿಸಿರುವರು. ಮಗು ಈ ತುಂಡುಗಳನ್ನು ಆಯಾ ಆಕಾರದ ಹಳ್ಳದಲ್ಲಿ ಜೋಡಿಸಬೇಕು.

ವುದರಿಂದ ಉಂಟಾದ ಪರಿಣಾಮ ಇದು. ಆಟ ಪೂರೈಸಿದ ಮೇಲೆ ಆಟಿಗೆಗಳನ್ನು ಒಂದು ಕಡೆ ಇಡುವುದು ಮಗುವಿನಲ್ಲಿ ಹುಟ್ಟಿರುವ ಒಂದು ಹೊಸ ಜ್ಞಾನದ ಸೂಚನೆ—ಇದಾವುದೆಂದರೆ, ಒಂದು ಕೆಲಸ 'ಮುಗಿಯಿತು' ಎಂಬ ತಿಳಿವಳಿಕೆ. ನಾಲ್ಕು ವರ್ಷದ ಮಗು ಈ ಅರಿವನ್ನು ಪಡೆದಿರುವುದಿಲ್ಲ. ಒಂದು ಆಟದ ಮಧ್ಯೆ ಮತ್ತೊಂದು ಆಟವನ್ನು ಪ್ರಾರಂಭಿಸಬಹುದು; ಆದರೆ ಐದು ವರ್ಷದ ಮಗು ಕೆಲಸವನ್ನು ಅದು ಪೂರೈಸುವ ವರೆಗೂ ಮಾಡುವುದು. ಆದುದ ರಿಂದಲೇ ತಂದೆತಾಯಿಗಳು ಯಾವುದಾದರೂ ಬರೆಯುವುದೋ ಇಲ್ಲವೇ ಸಣ್ಣ ಪುಟ್ಟ ಕೆಲಸವನ್ನೋ ಹೇಳಿದರೆ ಅದು ಮುಗಿಯುವ ವರೆಗೂ ತದೇಕಮಗ್ನನಾಗಿ ಮಾಡಿಮುಗಿಸುವುದು ಮತ್ತು ಮಾಡು ತ್ತಿರುವ ಕೆಲಸದ ಮಧ್ಯೆ ತಂದೆತಾಯಿಗಳು ಬೇಡವೆಂದರೆ ನಿಲ್ಲಿಸದೆ ಮುಗಿಯುವ ವರೆಗೂ ಅದನ್ನು ಮಾಡಿ, ವೃಥಾ ಹಟಮಾರಿ (!) ಎನ್ನಿಸಿಕೊಳ್ಳುವುದು. ಆದರೆ ನಿಜವಾಗಿಯೂ ಇದು 'ಹಟಮಾರಿ' ತನವಲ್ಲ. ಹಿಡಿದ ಕೆಲಸವನ್ನು ಸಾಧಿಸಿ ಮುಗಿಸಬೇಕೆಂಬ ದೃಢತೆ.

ಎಣಿಕೆಯಲ್ಲಿ ಐದು ವರ್ಷದ ಮಗುವಿಗೂ ನಾಲ್ಕು ವರ್ಷದ ಮಗುವಿಗೂ ಎಷ್ಟೋ ಅಂತರವಿರುವುದು. ನಾಲ್ಕು ವರ್ಷದ ಮಗು 'ಒಂದು ಎರಡು ಬಹಳ' ಎಂದು ಹೇಳುವುದು. ಐದು ವರ್ಷದ ಮಗುವಾದರೋ ಪದಾರ್ಥಗಳನ್ನು ಒಂದರಿಂದ ಹತ್ತರ ವರೆಗೂ ಎಣಿಸ ಬಲ್ಲುದು. ತನ್ನ ವಯಸ್ಸು ಎಷ್ಟೆಂಬುದನ್ನು ತಾನೇ ಹೇಳುವುದು. ಪದಾರ್ಥಗಳನ್ನು ಪಯೋಗಿಸಿ ಸಣ್ಣ ಪುಟ್ಟ ಸಂಕಲನ ವ್ಯವಕಲನಗಳ ಲೆಕ್ಕವನ್ನು ಹೇಳುವುದು.

ಈ ಹೊತ್ತು, ನಾಳೆ, ನಿನ್ನೆ ಎಂಬ ಕಾಲದ ತಿಳಿವಳಿಕೆಯು ಮುಂದುವರಿಯುವುದು. ಒಂದು ಆಟವನ್ನು ಅಥವಾ ಕೆಲಸವನ್ನು

ಮಾಡುತ್ತಿದ್ದು ಮಧ್ಯೆ ನಿಲ್ಲಿಸಿ ನಾಳೆ ದಿನ ಮುಂದುವರಿಸುವ ಅರಿವನ್ನು ಪಡೆದಿರುವುದು.

ಐದು ವರ್ಷಗಳ ಮಗುವಿನ ಉಚ್ಚಾರಣೆಯು ವಯಸ್ಕರ ಉಚ್ಚಾರಣೆಯಂತೆಯೇ ಸ್ಪಷ್ಟವಾಗಿರುವುದು. ಪ್ರಶ್ನೆಗಳನ್ನು ಕೇಳಿದರೆ ತಕ್ಕ ಉತ್ತರವನ್ನು ಕೊಡುವುದು. ತಾನು ಕೇಳುವ ಪ್ರಶ್ನೆಗಳಲ್ಲಿ ಒಂದು ನಿರ್ದಿಷ್ಟತೆಯನ್ನು ತೋರಿಸುವುದು. ಸಿಕ್ಕಾಬಟ್ಟೆ ಪ್ರಶ್ನೆಗಳನ್ನು ಕೇಳುವುದನ್ನು ನಿಲ್ಲಿಸಿ ಪ್ರತ್ಯೇಕ ಜ್ಞಾನಕ್ಕೋಸ್ಕರ ಮಾತ್ರ ಪ್ರಶ್ನಿಸುವುದು. "ಇದು ಏತಕ್ಕಾಗಿ ಇದೆ?" "ಇದು ಹೇಗೆ ಕೆಲಸ ಮಾಡುವುದು?" "ಇದರ ಅರ್ಥವೇನು?" "ಇವನ್ನು ಯಾರು ಮಾಡಿದರು?" ಎಂಬ ಈ ಪ್ರಶ್ನೆಗಳು ಅನೇಕವಾಗಿರುವುವು. ಇವು ಪ್ರಕೃತಿಯ ಜ್ಞಾನವನ್ನೂ ಯಾರು ಯಾವ ಕೆಲಸವನ್ನು ಮಾಡುವರೆಂಬ ಸಾಮಾಜಿಕ ಜ್ಞಾನವನ್ನೂ ಸ್ಪಷ್ಟೀಕರಿಸುವುವು. ಈ ತರಹದ ಕುತೂಹಲ ಈ ವಯಸ್ಸಿನಲ್ಲಿ ಮಗು ಹೇಳುವ ಪದಗಳ ಮತ್ತು ಪದಾರ್ಥಗಳ ಲಕ್ಷಣ ನಿರೂಪಣೆಗಳಿಂದ ಸ್ಪಷ್ಟವಾಗುವುದು. 'ಕುದುರೆ ಎಂದರೇನು?' ಎಂದು ಪ್ರಶ್ನಿಸಿದರೆ 'ಕುದುರೆ ಸವಾರಿ ಮಾಡುವುದಕ್ಕೆ' 'ಕುದುರೆ ಗಾಡಿ ಎಳೆಯುವುದಕ್ಕೆ' ಮುಂತಾದ್ದಾಗಿ ಹೇಳುವುದು. ಈ ರೀತಿ ಲಕ್ಷಣ ನಿರೂಪಣವು ಪದಾರ್ಥದ ಪ್ರಯೋಜನದ ಮೇಲೆ ಆಧಾರ ಹೊಂದಿರುವುದು.

ಈ ವಯಸ್ಸಿನಲ್ಲಿ ವಾಕ್ಯಗಳು ಸರಿಯಾದ ರೂಪವನ್ನು ಪಡೆದಿರುವುದು. ; ಆದರೆ ವಾಕ್ಯದಲ್ಲಿ ಕರ್ತೃ ಕರ್ಮ ಕ್ರಿಯೆಗಳು ವ್ಯಾಕರಣ ಬದ್ಧವಾಗಿರುವುವು. ಮತ್ತು ವಾಕ್ಯಗಳು ಸಂಪೂರ್ಣವಾಕ್ಯಗಳಾಗಿರುವುವು. ಎಲ್ಲಾ ವಿಧವಾದ, ಅಂದರೆ ಪ್ರಶ್ನಾರ್ಥಕ, ನಿಷೇಧಾರ್ಥಕ, ಆಶ್ಚರ್ಯಸೂಚಕ, ಪ್ರತಿಪಾದಕ ಇವೇ ಅಲ್ಲದೆ ಸಾಮಾನ್ಯ, ಸಂಯುಕ್ತ ಮತ್ತು ಸಂಯೋಜಿತ ವಾಕ್ಯಗಳನ್ನು ಸಹ ಉಪಯೋಗಿಸುವುದು.

ಪರಿಶೀಲನೆಯಿಂದ ಕಂಡುಬಂದಿರುವ ಮುಖ್ಯಾಂಶವೇನೆಂದರೆ— ನಾಲ್ಕು ವರ್ಷಗಳ ವಯಸ್ಸಿನಲ್ಲಿ ಸಾವಿರ-ಸಾವಿರದೈನೂರು ಪದಗಳನ್ನು ತಿಳಿದುಕೊಂಡಿದ್ದ ಮಗು ಐದು ವರ್ಷಗಳ ವಯಸ್ಸಿನಲ್ಲಿ ಎರಡುಸಾವಿರ ಪದಗಳನ್ನು ಅರಿತಿರುವುದು.

ಐದು ವರ್ಷಗಳ ಮಗು ಊಟ, ಉಡುಪು, ಸ್ನಾನ ಇತ್ಯಾದಿ ದಿನಚರಿಗಳಲ್ಲಿ ಪಳಗಿರುವುದೇ ಅಲ್ಲದೆ ತನ್ನ ತಂಗಿ ತಮ್ಮಂದಿರನ್ನು ಸಹ ನೋಡಿಕೊಳ್ಳುವಷ್ಟು ಶಕ್ತಿಯನ್ನು ಪಡೆದಿರುವುದು. ಮುಖ್ಯವಾಗಿ ಬಡ ಮನೆತನಗಳಲ್ಲಿ ಐದು ವರ್ಷದ ಮಕ್ಕಳು ತಮಗಿಂತ ಚಿಕ್ಕ ಮಕ್ಕಳನ್ನು ತಾಯಿಯು ನೋಡಿಕೊಂಡಹಾಗೆ ನೋಡಿಕೊಳ್ಳುವರು. ತನ್ನ ಹೆಸರು, ತನ್ನ ತಂದೆಯ ಹೆಸರು, ವಿಳಾಸ ಮುಂತಾದ ವರಣೆವಿಗಳನ್ನು ಕೇಳಿದರೆ ಐದು ವರ್ಷದ ಮಗು ಹೇಳಬಲ್ಲುದು. ಕಾರಣಾಂತರಗಳಿಂದ ಮಗು ತಪ್ಪಿಸಿಕೊಂಡರೂ ತನ್ನ ಹೆಸರು ವಿಳಾಸಗಳನ್ನು ಪೋಲೀಸಿನವರಿಗೆ ಹೇಳಿ ಮನೆಗೆ ಹಿಂತಿರುಗಿ ಬರುವುದು.

ಇತರ ಮಕ್ಕಳೊಡನೆ ಸ್ನೇಹ ಭಾವವನ್ನು ಬೆಳಸುವುದು. ಈ ವಯಸ್ಸಿನ ಮಕ್ಕಳು ಮೂರು, ನಾಲ್ಕು, ಐದು ಮಂದಿ ಗುಂಪು ಸೇರಿ ಆಡಿಕೊಳ್ಳುವರು. ಸ್ಪರ್ಧೆಯ ಭಾವನೆಯು ತಲೆದೋರಿ ಬೇರೆ ಮಗುವಿಗಿಂತ ತಾನು ಚೆನ್ನಾಗಿ ಮಾಡಬೇಕೆಂಬ ತಿಳಿವಳಿಕೆಯು ಬರುವುದು. ಒಂಟಿಯಾಗಿ ಆಡಿಕೊಳ್ಳುವ ಇಚ್ಛೆಯು ಬಹುಮಟ್ಟಿಗೂ ಕ್ಷೀಣಿಸಿ ಹೋಗುವುದು. ಬೇರೆ ಮಕ್ಕಳೊಡನೆ ಸೇರಬೇಕೆಂಬ ಕುತೂಹಲವು ಹೆಚ್ಚುವುದು. ಇತರ ಮಕ್ಕಳೊಡನೆ ಸೇರಿ ಮನೆ ಕಟ್ಟುವುದು, ಬಾವಿ ತೋಡುವುದು ಮುಂತಾದ ಆಟಗಳನ್ನು ಆಡುವುದು.

ಈ ವಿಧವಾಗಿ ಮಗು, ಐದು ವರ್ಷಗಳ ವಯಸ್ಸಿನಲ್ಲಿ ತನ್ನ ಅವಯವಗಳ ಮೇಲಿನ ಹತೋಟಿ, ಆಕೃತಿಜ್ಞಾನ, ಭಾಷೆಯ ಬೆಳ

ವಣಿಗೆ, ಸಾಮಾಜಿಕ ಮತ್ತು ಪ್ರಕೃತಿ ಸಂಬಂಧವಾದ ತಿಳಿವಳಿಕೆ, ವ್ಯಕ್ತಿತ್ವದ ಅರಿವು ಇವುಗಳಲ್ಲೆಲ್ಲಾ ಮುಂದುವರಿದು, ಇನ್ನು ಸ್ವಲ್ಪ ಕಾಲದನಂತರ ಮನೆಯನ್ನು ಬಿಟ್ಟು ಶಾಲೆಗೆ ಹೋಗಲು ತಯಾರಾಗುವುದು.

## ಅಧ್ಯಾಯ ೫.

### ಅಭ್ಯಾಸಗಳು

"ಶೀಲಂ ಪರಂ ಭೂಷಣಂ" ಎಂಬ ನಾಣ್ಣುಡಿಯು ಎಲ್ಲರಿಗೂ ಗೊತ್ತಿರುವುದು. ಶೀಲವಂತರಾಗಬೇಕಾದರೆ ಚಿಕ್ಕಂದಿನಲ್ಲಿಯೇ ತಕ್ಕ ತಳಹದಿಯನ್ನು ಪಡೆದಿರಬೇಕಾದುದು ಅಗತ್ಯ. ಚಿಕ್ಕ ಮಕ್ಕಳಾಗಿರುವಾಗ ಒಳ್ಳೆಯ ಅಭ್ಯಾಸಗಳನ್ನು ಕಲಿಯದಿದ್ದರೆ ದೊಡ್ಡವರಾದ ಮೇಲೆ ತಿದ್ದಿಕೊಳ್ಳುವುದು ಕಷ್ಟ. ಆದುದರಿಂದಲೇ ವಯಸ್ಸಾದ ಘಟಿಂಗನನ್ನು ಸರಿಪಡಿಸುವುದು ಅಸಾಧ್ಯದ ಕೆಲಸವಾಗುವುದು. ಒಳ್ಳೆಯ ಅಭ್ಯಾಸಗಳನ್ನು ಮಕ್ಕಳಿಗೆ ಕಲಿಸಬೇಕಾದರೆ ಮನಶ್ಶಾಸ್ತ್ರದ ಕೆಲವು ನಿಯಮಗಳನ್ನು ಅನುಸರಿಸಬೇಕು. ಈ ಅಧ್ಯಾಯದಲ್ಲಿ ಈ ನಿಯಮಗಳನ್ನು ಸೂಚಿಸಿ ಅನಂತರ ಮಗುವಿನ ಊಟ, ಉಡುಪು, ಸ್ನಾನ ಮುಂತಾದ ಅಭ್ಯಾಸ ಕ್ರಮಗಳನ್ನು ಕುರಿತು ಕೆಲವು ವಿಷಯಗಳನ್ನು ಪ್ರಸ್ತಾಪಿಸಲಾಗಿದೆ.

ಮೊದಲನೆಯ ಭಾಗದಲ್ಲಿ ಹೇಳಿರುವಂತೆ ಮಕ್ಕಳ ಬೆಳವಣಿಗೆಯು ಒಂದು ನಿಯಮವನ್ನನುಸರಿಸಿ ಮುಂದುವರಿಯುವುದು. ಅವರಿಗೆ ಯಾವ ಅಭ್ಯಾಸಗಳನ್ನು ಕಲಿಸಬೇಕಾದರೂ ಅವರ ಬೆಳವಣಿಗೆಯ ಮಟ್ಟವನ್ನು ತಿಳಿದು ಕಲಿಸಬೇಕು. ಇಲ್ಲದಿದ್ದರೆ ಶಕ್ತಿಗೆ ಮೀರಿದ ಕೆಲಸಗಳನ್ನು ಅವರಿಗೆ ಕಲಿಸಹೋಗಿ ವಿಫಲರಾದರೆ ಅವರು ದಡ್ಡರೆಂದೂ ಉದಾಸೀನವನ್ನು ತೋರಿಸುವರೆಂದೂ ತಂದೆತಾಯಿಗಳು ಅಭಿಪ್ರಾಯ ಪಡುವರು. ಇಷ್ಟೇ ಅಲ್ಲದೆ ಅಂತಹ ಮಕ್ಕಳ ಮೇಲೆ ರೇಗಿ ಜುಗುಪ್ಸೆಯನ್ನು ತೋರಿಸುವರು. ಮಕ್ಕಳ ಬೆಳವಣಿಗೆಯ ಮಟ್ಟಕ್ಕೆ ಕಡಮೆಯಾಗಿರುವ ಕೆಲಸಗಳನ್ನು ಕಲಿಸುವುದಕ್ಕೆ

ಯತ್ನಿಸಿದರೆ ಮಕ್ಕಳು ಉತ್ಸಾಹರಹಿತರಾಗಿ ಹಿಂದುಳಿಯುವರು. ಆದುದರಿಂದ ಯಾವ ಅಭ್ಯಾಸವೇ ಆಗಲಿ ಅವರ ವಯಸ್ಸಿಗೂ ಬೆಳವಣಿಗೆಯ ಮಟ್ಟಕ್ಕೂ ತಕ್ಕಂತಿರಬೇಕು. ಮೇಲೆ ಹೇಳಿರುವ ಹಾಗೆ (ಅಧ್ಯಾಯ ೪) ಮಗು ಐದು ವರ್ಷ ವಯಸ್ಸಾದರೂ ವಜ್ರಾಕೃತಿಯನ್ನು ಕಷ್ಟದಿಂದಲೇ ಅನುಕರಿಸುವುದು. ಕಷ್ಟವಾದ ಆಕಾರಗಳನ್ನು ಪಡೆದಿರುವುದಿಲ್ಲ. ಆದುದರಿಂದ ಈ ವಯಸ್ಸಿನಲ್ಲಿ ಅಥವಾ ಇದಕ್ಕೆ ಮುಂಚೆ ಅಕ್ಷರಾಭ್ಯಾಸವನ್ನು ಮಾಡಿಸಲು ಪ್ರಯತ್ನಿಸುವುದು ನಿಷ್ಪ್ರಯೋಜಕವಾದುದು. ಎಲ್ಲಿಯೋ ಒಂದೊಂದು ಮಗು ಈ ವಯಸ್ಸಿನಲ್ಲಿ ಅಕ್ಷರಗಳನ್ನು ಕಲಿಯಬಲ್ಲುದಾದರೂ ಸಾಧಾರಣವಾಗಿ ಇನ್ನೊಂದು ವರ್ಷವಾದ ಮೇಲೆ, ಎಂದರೆ, ಮಗುವಿನ ಆರು ವರ್ಷಗಳ ವಯಸ್ಸಿನಲ್ಲಿ ಅನಾಯಾಸವಾಗಿ ಅಕ್ಷರಗಳನ್ನು ಅನುಕರಿಸುವುದು.

ಅಭ್ಯಾಸಗಳನ್ನು ಕಲಿಸುವಾಗ ಗಮನದಲ್ಲಿಟ್ಟಿರಬೇಕಾದ ಮತ್ತೊಂದು ವಿಷಯವೇನೆಂದರೆ—ಒಂದು ಮಗುವಿಗೂ ಮತ್ತೊಂದು ಮಗುವಿಗೂ ಬುದ್ಧಿಶಕ್ತಿ, ಚತುರತೆ ಮುಂತಾದ ವಿಷಯಗಳಲ್ಲಿ ಸ್ವಾಭಾವಿಕವಾಗಿಯೇ ವ್ಯತ್ಯಾಸಗಳಿರುವುವು. ಆದುದರಿಂದ ಒಂದು ಮಗು ಒಂದು ಅಭ್ಯಾಸವನ್ನು ಸ್ವಲ್ಪ ತಡವಾಗಿ ಕಲಿತರೆ ತಂದೆ ತಾಯಿಗಳು ನಿರಾಶೆಯನ್ನು ಹೊಂದಬೇಕಾದುದಿಲ್ಲ. ಶಕ್ತಿಗೆ ಮೀರಿದ ಕೆಲಸಗಳನ್ನು ಕಲಿಸಹೋದರೆ ಮಗು ಸೋತು ವ್ಯಸನ ನಿರಾಶೆಗಳಿಂದ ಕೂಡಿ ಆತ್ಮ ಭರವಸೆಯನ್ನೇ ಕಳೆದುಕೊಳ್ಳುವುದು. ಒಂದು ಅಭ್ಯಾಸವನ್ನು ಕಲಿಯಬೇಕಾದರೆ ಉತ್ಸಾಹವಿರಬೇಕು. ಒಂದು ಕೆಲಸ ಸುಲಭವಾಗಿರುವುದೆಂದೋ, ಅದರಿಂದ ಲಾಭ ದೊರೆಯುವುದೆಂದೋ ತಿಳಿದು ಮಗು ಉತ್ಸಾಹವನ್ನು ಪಡೆಯುವುದು. ಆದುದರಿಂದ ಕಲಿಸಿಕೊಡುವ ಅಭ್ಯಾಸ ಸುಲಭವಾಗಿಯೂ, ಲಾಭದಾಯಕವಾದುದಾಗಿಯೂ ಇರಬೇಕು.

ಸಾಧಾರಣವಾಗಿ ಸಣ್ಣ ಮಕ್ಕಳಿಗೆ ಒಂದು ಅಭ್ಯಾಸವನ್ನು ಕಲಿಸಿಕೊಡುವಾಗ ಅವರು ಸಾಮರ್ಥ್ಯವಿಲ್ಲದವರೆಂದು ಅಭಿಪ್ರಾಯ ಪಟ್ಟು ತಂದೆ ತಾಯಿಗಳು ಅವರಿಗೆ ಮಿತಿಮೀರಿದ ಸಹಾಯವನ್ನು ನೀಡುವರು. ಇದರಿಂದ ಮಕ್ಕಳಲ್ಲಿ ಸ್ವಪ್ರಯತ್ನವೇ ಇಲ್ಲದಂತಾಗುವುದು. ಆದರೆ ಚಿಕ್ಕವರಲ್ಲೇ ಆಗಲಿ, ದೊಡ್ಡವರಲ್ಲೇ ಆಗಲಿ ಸ್ವಪ್ರಯತ್ನದಿಂದ ಕಲಿತ ಅಭ್ಯಾಸಗಳು ಸ್ಥಿರವಾಗಿ ನಿಲ್ಲಬಲ್ಲುವು. ಚಿಕ್ಕ ವಯಸ್ಸಿನಿಂದಲೂ ಸ್ವಪ್ರಯತ್ನಕ್ಕೆ ಸಾಕಾದ ಅವಕಾಶಗಳನ್ನು ಕಲ್ಪಿಸಿ ಕೊಡಬೇಕು. ಗಮನದಲ್ಲಿಡಬೇಕಾದ ಮತ್ತೊಂದು ಅಂಶವೇನೆಂದರೆ, ಒಂದು ಮಗು ಅನಿಷ್ಟವಾದ ಅಥವಾ ಹಾನಿಕರವಾದ ಕೆಲಸವನ್ನು ಮಾಡಿದ ಒಂದೊಂದು ಸಲವೂ ಅದನ್ನು ತಡೆಯಬೇಕು. ಆ ಕೆಲಸವನ್ನು ಮಾಡುವುದಕ್ಕೆ ಅವಕಾಶವೇ ಇಲ್ಲದಂತೆ ಮಾಡಬೇಕು. ಮಾಡಿದ ಪ್ರತಿ ಸಲವೂ ಅದು ಒಳ್ಳೆಯದಲ್ಲವೆಂದು ದೃಢವಾಗಿ ತೋರಿಸಿಕೊಡಬೇಕು. ಹೀಗೆಯೇ ಒಳ್ಳೆಯ ಕೆಲಸವು ಅನೇಕ ಸಲ ನಡೆಯುವ ಹಾಗೆ ಅವಕಾಶವನ್ನುಂಟುಮಾಡಿಕೊಡಬೇಕು. ಒಳ್ಳೆಯ ನಡವಳಿಕೆಯು ನೆಲಸಬೇಕಾದರೆ ಅದು ಪುನಃ ಪುನಃ ಸಂಭವಿಸುವಂತೆಯೂ, ಕೆಟ್ಟ ನಡವಳಿಕೆಯನ್ನು ಬಿಡಿಸಬೇಕಾದರೆ ಅದು ಮತ್ತೊಮ್ಮೆ ಉಂಟಾಗದಂತೆಯೂ ನೋಡಿಕೊಳ್ಳಬೇಕಾದುದು ಅತ್ಯಾವಶ್ಯಕ.

ಮಗುವಿಗೆ ಶಿಕ್ಷಣ ಕೊಡುವಾಗ ಅದರ ಹಿತವನ್ನು ಯಾವಾಗಲೂ ಗುರಿಯಲ್ಲಿಟ್ಟಿರಬೇಕು. ಅದು ದುರಭ್ಯಾಸಗಳನ್ನು ಕಲಿತರೆ ನಮ್ಮ ಆತ್ಮ ಗೌರವಕ್ಕೆ ಕುಂದುಕವುಂಟಾಯಿತೆಂದು ಕೋಪಗೊಂಡು ಮಗುವನ್ನು ಬಯ್ಯಬಾರದು, ಹೊಡೆಯಬಾರದು. ಹೀಗೆ ಮಾಡುವುದರಿಂದ ದ್ವೇಷ ಮುಂತಾದ ಭಾವಗಳು ಹುಟ್ಟುವುದಕ್ಕೆ ಕಾರಣವಾಗುವುದು. ದುರಭ್ಯಾಸವನ್ನು ಹೋಗಲಾಡಿಸಲು ತಕ್ಕ ಯೋಚನೆ

ಮಾಡಿ ತಿದ್ದಬೇಕು. ದುರಭ್ಯಾಸಗಳುಳ್ಳ ಮಗುವನ್ನು ಕ್ರೂರವಾಗಿ ಶಿಕ್ಷಿಸಿದರೆ ಮಗುವಿಗೆ ದುರಭ್ಯಾಸದ ಮೇಲೆ ಕೋಪ, ಜುಗುಪ್ಸೆಗಳು ಹುಟ್ಟುವುದಕ್ಕೆ ಬದಲಾಗಿ ಶಿಕ್ಷಿಸುವವರ ಮೇಲೆ ಹುಟ್ಟುವುವು. ಇವಲ್ಲದೆ ಮಕ್ಕಳ ತಪ್ಪನ್ನು ತಿದ್ದುವಾಗ ಏಕ ಪದ್ಧತಿಯನ್ನು ಅನುಸರಿಸಬೇಕು. ಅಂದರೆ, ಅದು ತಪ್ಪುಮಾಡಿದಾಗಲೆಲ್ಲಾ ಒಂದೇ ವಿಧವಾದ ವರ್ತನೆಯನ್ನವಲಂಬಿಸಿ ತಿದ್ದಬೇಕು. ಮಗು ಒಂದು ಅನಿಷ್ಟವಾದ ಕೆಲಸ ಮಾಡಿತೆಂದರೆ ಮೊದಮೊದಲು ಹಾಸ್ಯಕ್ಕಾಗಿ ನಕ್ಕು ಆಮೇಲೆ ಅದು ಪದೇ ಪದೇ ಮಾಡಿದರೆ ಕೋಪಗೊಳ್ಳುವುದು ಸಾಧಾರಣವಾಗಿ ಕಂಡುಬರುವುದು. ಆದರೆ ತಂದೆತಾಯಿಗಳು ಮೊದಮೊದಲು ನಗುವುದರಿಂದ ಮಗು ಆ ಕೆಲಸವು ಅವರಿಗೆ ಪ್ರೀತಿಕರವಾದುದೆಂದು ಪದೇ ಪದೇ ಮಾಡಲಾರಂಭಿಸುವುದು. ಹಾಗೆ ಅದೇ ಕೆಲಸ ಮತ್ತೆ ಮಾಡಿದಾಗ ತಂದೆ ತಾಯಿಗಳು ಕೋಪವನ್ನು ಸೂಚಿಸಿದರೆ ಮಗು ದಿಗ್ಭ್ರಮೆಯನ್ನು ಹೊಂದುವುದು. ಆ ಕೆಲಸವನ್ನು ಮಾಡಬೇಕೇ ಬಿಡಬೇಕೇ ಎಂದು ಅರಿಯದೆ ಒಳತೋಟಿಗೆ ಸಿಲುಕುವುದು. ಸ್ವೇಚ್ಛೆಯಾಗಿ ವರ್ತಿಸುವುದನ್ನು ಬಿಟ್ಟು ಯಾವಾಗಲೂ ಸಂಶಯಗ್ರಸ್ತವಾಗಿರುವುದು. ಆದುದರಿಂದ ಆದಷ್ಟು ಮಟ್ಟಿಗೆ ಏಕಪದ್ಧತಿಯನ್ನು ಅವಲಂಬಿಸುವುದು ಅತ್ಯಾವಶ್ಯಕ. ಇಲ್ಲದಿದ್ದರೆ ಮಕ್ಕಳು ಹದಗೆಡುವರು.

೧. **ನಿದ್ರೆ**:—ಮೇಲೆ ಹೇಳಿರುವ ಅಭ್ಯಾಸಗಳ ನಿಯಮಗಳನ್ನು ಅನುಸರಿಸಿ ಮಗುವಿನ ಶಿಕ್ಷಣ ಯಾವ ರೀತಿಯಲ್ಲಿ ಮುಂದುವರಿಯಬೇಕೆಂದು ನೋಡೋಣ. ಮಗುವಿನ ಒಂದು ಮುಖ್ಯ ಲಕ್ಷಣವೇನೆಂದರೆ ಹೆಚ್ಚುಕಾಲದ ನಿದ್ರೆ. ಸಾಧಾರಣವಾಗಿ ಮೊದಲ ತಿಂಗಳಲ್ಲಿ ಮಗು ದಿನ ಒಂದಕ್ಕೆ ೧೯ ಘಂಟೆಗಳ ಕಾಲ ನಿದ್ರಿಸುವುದು. ಇಷ್ಟು ಹೆಚ್ಚುಕಾಲ ನಿದ್ರೆಮಾಡುವ ಮಗು ಬೆಳೆಯುತ್ತ ಬೆಳೆಯುತ್ತ

ನಿದ್ರೆಯ ಅವಧಿಯನ್ನು ಕಡಮೆ ಮಾಡಿಕೊಂಡು ಎರಡು ಮೂರು ವರ್ಷಗಳ ವಯಸ್ಸಾಗುವುದರಲ್ಲಿ ಸರಿಯಾಗಿ ನಿದ್ದೆಮಾಡದೆ ತಾಯಿಗೆ ಬಹಳ ಕಷ್ಟವನ್ನು ಕೊಡುವುದು. ಇದೇ ಏಕೆ? ದೊಡ್ಡವರಾದ ಮೇಲೆಯೂ ಎಷ್ಟೋ ಮಂದಿ ನಿದ್ರೆ ಹಿಡಿಯದೆ ರಾತ್ರಿಯೆಲ್ಲಾ ನರಳಾಡುತ್ತ ಬೆಳಗಿನ ಹೊತ್ತು ಕೋಪ ತಾಪಗಳಿಂದ ವರ್ತಿಸುವರು. ಹೀಗಾಗಲು ಕಾರಣವೇನು ?

ತಾಯಿ ತಂದೆಗಳು ನಿದ್ರೆಯ ವಿಚಾರವಾಗಿ ಎರಡು ಅಂಶಗಳನ್ನು ಗಮನದಲ್ಲಿಡಬೇಕು. ಮೊದಲನೆಯದಾಗಿ, ಮಗು ಬೆಳೆಯುತ್ತ ಬೆಳೆಯುತ್ತ ನಿದ್ರೆಯ ಅವಧಿಯಲ್ಲಿ ಬದಲಾವಣೆಯುಂಟಾಗುವುದು, ಮತ್ತು ನಿದ್ರೆಯು ಬಳಲಿಕೆಯಿಂದ ಹುಟ್ಟುವುದಾದರೂ ಆಯಾ ಕಾಲ ಮತ್ತು ಸಂದರ್ಭಗಳಿಗೆ ಅನುಸಾರವಾಗಿಯೂ ಉಂಟಾಗುವುದು. ಹುಟ್ಟಿದ ಮೊದಲನೆಯ ತಿಂಗಳಲ್ಲಿ ೧೯ ಘಂಟೆಗಳ ಕಾಲ ನಿದ್ರಿಸುತ್ತಿದ್ದ ಮಗು ಬೆಳೆಯುತ್ತ ಬೆಳೆಯುತ್ತ ಕಡಮೆ ಹೊತ್ತು ನಿದ್ರೆ ಮಾಡುವುದು. ಮೂರು ತಿಂಗಳ ವಯಸ್ಸಿನಲ್ಲಿ ದಿನ ಒಂದಕ್ಕೆ ೧೫ ಘಂಟೆಗಳ ಕಾಲವೂ ಹನ್ನೆರಡು ತಿಂಗಳ ವಯಸ್ಸಿಗೆ ೧೨ ಘಂಟೆಗಳ ಕಾಲವೂ ನಿದ್ರೆಮಾಡುವುದು. ಆದರೆ ಮಗು ಆಗಿಂದಾಗ್ಗೆ ಎಚ್ಚರಗೊಳ್ಳುವುದು, ಕೈಕಾಲುಗಳನ್ನಾಡಿಸಿ ಹಾಲು ಕುಡಿದನಂತರ ಪುನಃ ಮಲಗುವುದು. ಮೊದಲ ತಿಂಗಳಲ್ಲಿ ಮೂರೂವರೆ-ನಾಲ್ಕು ಘಂಟೆಗಳ ಹೊತ್ತು ನಿರಾತಂಕವಾಗಿ ನಿದ್ರಿಸುತ್ತಿತ್ತು, ಬೆಳೆಯುತ್ತ ಬೆಳೆಯುತ್ತ ಈ ನಿರಾತಂಕ ನಿದ್ರೆಯ ಅವಧಿಯು ಹೆಚ್ಚುವುದು. ಮೂರು ತಿಂಗಳ ವಯಸ್ಸಿನಲ್ಲಿ ಆರು ಘಂಟೆಗಳ ಕಾಲವೂ, ಒಂದು ವರ್ಷ ವಯಸ್ಸಿನಲ್ಲಿ ೯-೧೦ ಘಂಟೆಗಳ ಕಾಲವೂ ಎಚ್ಚರಗೊಳ್ಳದೆ ನಿದ್ರಿಸುವುದು. ಹುಟ್ಟಿದಾಗ ರಾತ್ರಿ ಹಗಲು ಎಂಬ ವ್ಯತ್ಯಾಸವಿಲ್ಲದೆ ಮೂರು ನಾಲ್ಕು ಘಂಟೆಗಳಿಗೊಮ್ಮೆ

ಎಚ್ಚರಗೊಳ್ಳುತ್ತಿದ್ದ ಮಗು ಕ್ರಮೇಣ ಬೆಳಗಿನ ಹೊತ್ತು ಹೆಚ್ಚು ಹೊತ್ತು ಎಚ್ಚರಗೊಂಡಿದ್ದು ರಾತ್ರಿಯ ವೇಳೆ ನಿರಾತಂಕವಾದ ನಿದ್ರೆಯನ್ನು ಮಾಡಲು ಕಲಿಯುವುದು. ಈ ಅಭ್ಯಾಸವನ್ನು ಕಲಿಯಲು ತಾಯಿಯು ಸಹಕಾರಿಣಿಯಾಗಬೇಕು. ಹುಟ್ಟಿದ ದಿನದಿಂದಲೂ ರಾತ್ರಿಯಲ್ಲಿ ಮಗುವಿಗೆ ಅದು ಎಚ್ಚೆತ್ತಾಗಲೆಲ್ಲಾ ಹಾಲು ಕೊಡಬಾರದು. ಎಚ್ಚರಗೊಂಡರೆ ಸ್ವಲ್ಪ ಬೆಚ್ಚಗಿರುವ ನೀರಿನಲ್ಲಿ ಸಕ್ಕರೆಯನ್ನು ಬೆರಸಿ ಕೊಡಬಹುದು. ಆಗ ಮಗು ಕೂಡಲೇ ಪುನಃ ನಿದ್ರಿಸಲಾರಂಭಿಸುವುದು. ಆದರೆ ಮಧ್ಯ ರಾತ್ರಿಯಲ್ಲಿ ಹಾಲು ಕುಡಿಸಿದರೆ ನಿದ್ರಾಭಂಗವಾಗಿ, ಅದೇ ಅಭ್ಯಾಸವಾಗಿ ತಾಯಿ ಮಕ್ಕಳಿಬ್ಬರಿಗೂ ಪ್ರಯಾಸವುಂಟಾಗುವುದು ; ಈ ಅಭ್ಯಾಸವನ್ನು ಹುಟ್ಟಿದ ಮೊದಲನೆಯ ದಿನದಿಂದಲೂ ಆರಂಭಿಸಬೇಕು. ಮತ್ತೊಂದು ಅಭ್ಯಾಸವೇನೆಂದರೆ ರಾತ್ರಿಯ ವೇಳೆ ಹತ್ತು ಘಂಟೆಗೆ ಸರಿಯಾಗಿ ಹಾಲು ಕುಡಿಸಿ ಮಗುವನ್ನು ಮಲಗಿಸಿ ಮೊದಮೊದಲು ಬೆಳಗಿನ ಜಾವ ೫ ಘಂಟೆಗೆ ಮಗುವಿಗೆ ಮತ್ತೆ ಹಾಲು ಕೊಡಬೇಕು. ಮಗು ಬೆಳೆಯುತ್ತ ಬೆಳೆಯುತ್ತ ರಾತ್ರಿ ಒಂಬತ್ತು ಹತ್ತು ಘಂಟೆಯಿಂದ ಬೆಳಗ್ಗೆ ೬-೭ ಘಂಟೆಯ ವರೆಗೂ ನಿರಾತಂಕವಾಗಿ ನಿದ್ರೆ ಮಾಡುವುದನ್ನು ಕಲಿಸಬೇಕು.

ನಿದ್ರೆಗೆ ಸಂಬಂಧಪಟ್ಟ ಅಭ್ಯಾಸಗಳು ಹಲವಾರು ಉಂಟು. ಹೊತ್ತಿಗೆ ಸರಿಯಾಗಿ ದಿನದಿನವೂ ಮಗುವನ್ನು ಮಲಗಿಸಬೇಕು. ಹೊತ್ತಿಗೆ ಸರಿಯಾಗಿ ಅದನ್ನು ಎಚ್ಚರಗೊಳಿಸಬೇಕು. ಪ್ರತಿ ನಿತ್ಯವೂ ಒಂದು ನಿಶ್ಚಿತವಾದ ಸ್ಥಳದಲ್ಲಿ ನಿಶ್ಚಿತವಾದ ಹಾಸಿಗೆಯ ಮೇಲೆ ನಿರ್ದಿಷ್ಟವಾದ ರೀತಿಯಲ್ಲಿ ಮಲಗಿಸಬೇಕು. ಹೀಗೆ ಮಾಡಿದರೆ ಮಗು ಕಾಲ ಮತ್ತು ಸನ್ನಿವೇಶಗಳು ಒದಗಿದ ಕೂಡಲೇ ಯಾವ ಯಾವ ತೊಂದರೆಯೂ ಇಲ್ಲದೆ ತಾನೇ ಮಲಗಿ ನಿದ್ರಿಸುವುದು.

ಮಗು ಹೊತ್ತಿಗೆ ಸರಿಯಾಗಿ ನಿದ್ರೆ ಮಾಡದಿದ್ದರೆ ಆ ದುರಭ್ಯಾಸಕ್ಕೆ ತಾಯಿಯೇ ಕಾರಣ. ಇತರ ಕೆಲಸಗಳನ್ನು ಬಿಟ್ಟು ಹೊತ್ತಿಗೆ ಸರಿಯಾಗಿ ಎಷ್ಟು ಮಂದಿ ತಾಯಂದಿರು ಮಗುವನ್ನು ಮಲಗಿಸುವರು? ಕೆಲವರು ಮಗುವನ್ನು ತೊಡೆಯ ಮೇಲೆ ಹಾಕಿ, ತೂಗಿ, ತಟ್ಟಿ ಎಷ್ಟೋ ಕಷ್ಟದಿಂದ ಮಗುವನ್ನು ಮಲಗಿಸುವರು. ಈ ಸನ್ನಿವೇಶದಲ್ಲಿ ಅವರು ಎಷ್ಟುಕಾಲ ಬಿಡದೆ ಹೀಗೆ ಮಾಡುವರೋ ಅಷ್ಟು ಕಾಲವೂ ಅವರಿಗೂ ಮಕ್ಕಳಿಗೂ ತೊಂದರೆಯೇ ಹೊರತು ಸುಖವಿಲ್ಲ. ಮಗುವನ್ನು ಒಂದು ಗೊತ್ತಾದ ಕಡೆಯಲ್ಲಿ ಹೊತ್ತಿಗೆ ಸರಿಯಾಗಿ ಮಲಗಿಸಿದರೆ ಸ್ವಲ್ಪ ಹೊತ್ತು ನಿದ್ದೆಮಾಡದೆ ತೊಂದರೆಯನ್ನು ಕೊಟ್ಟರೂ ಆಮೇಲೆ ಸರಿಯಾಗಿ ನಿದ್ರಿಸುವುದು. ಈ ತೊಂದರೆಯು ಕೆಲವು ದಿನಗಳ ವರೆಗೆ ಮಾತ್ರವೇ ಇರುವುದು. ನಾಲ್ಕಾರು ದಿವಸಗಳೊಳಗೆ ದುರಭ್ಯಾಸವು ದೂರವಾಗಿ ಹೊಸ ಅಭ್ಯಾಸವುಂಟಾಗುವುದು. ಅನೇಕ ತಾಯಂದಿರು ಮಗುವನ್ನು ಮಲಗಿಸುವಾಗ ಅದರ ಕೈಗೆ ಬೊಂಬೆಯೊಂದನ್ನೋ ಸಕ್ಕರೆ ಚೂರನ್ನೋ ಕೊಟ್ಟು ನಿದ್ರೆ ಮಾಡುವಂತೆ ಪ್ರೇರೇಪಿಸುವರು. ಈ ದುರಭ್ಯಾಸವು ಶಾಶ್ವತವಾಗಿ ನಿಂತು ಆ ಸಲಕರಣೆಗಳಿಲ್ಲದಿದ್ದರೆ ಮಗು ನಿದ್ದೆ ಮಾಡುವುದೇ ಇಲ್ಲ. ಆದುದರಿಂದಲೇ ನೆಂಟರ ಮನೆಗೆ ಹೋದಾಗ ಮಕ್ಕಳು ನಿದ್ದೆ ಮಾಡದೆ ತಾಯಂದಿರನ್ನು ಗೋಳುಗುಟ್ಟಿಸುವುದು.

ಎಷ್ಟೋ ಮನೆಗಳಲ್ಲಿ ಮಕ್ಕಳು ಮಲಗುವಾಗ ತಲೆಯ ಬಳಿಯಲ್ಲಿ ಕುಳಿತು ದೊಡ್ಡವರು ಹರಟೆ ಹೊಡೆಯುವರು. ಇದರಿಂದ ಮಕ್ಕಳಿಗೆ ನಿದ್ರಾಭಂಗವಾಗಿ, ದೊಡ್ಡವರಾಡುವ ಮಾತುಗಳನ್ನು ಕೇಳುತ್ತ ಮಲಗುವುದರಿಂದ ಕನಸುಗಳಿಂದ ಕೂಡಿದ ಅರೆನಿದ್ರೆಯನ್ನು ಮಾಡುವರು. ಮತ್ತೆ ಒಂದು ದುರಭ್ಯಾಸವೇನೆಂದರೆ ಮಲಗುವ ಸಮಯದಲ್ಲಿ ಮಕ್ಕಳಿಗೆ ಕತೆ ಹೇಳುವುದು. ಕತೆಯನ್ನು ಕೇಳಿದ

ಮಗು ಉದ್ರೇಕಗೊಳ್ಳುವುದು ; ಆದರೆ ನಿದ್ರೆಯು ಪ್ರಾಪ್ತವಾಗಲು ವಿಶ್ರಾಂತಿ, ಶಾಂತಿ, ಕತ್ತಲೆಗಳೆಲ್ಲವೂ ಆವಶ್ಯಕ. ಕತೆಯನ್ನು ಕೇಳುತ್ತಿರುವ ಮಗುವಿಗೆ ಶಾಂತಿಯೆಲ್ಲಿ ? ವಿಶ್ರಾಂತಿಯೆಲ್ಲಿ ? ಚಿಕ್ಕಂದಿನಲ್ಲಿ ಉಂಟಾದ ಈ ದುರಭ್ಯಾಸವು ಬೆಳೆದ ಮೇಲೆ ನಿಂತು ನಿದ್ರಾಭಂಗಕ್ಕೆ ಕಾರಣವಾಗುವುದು.

ಕೆಲವು ತಾಯಂದಿರು ಇನ್ನೊಂದು ವಿಧವಾದ ದುರಭ್ಯಾಸವನ್ನು ಕಲಿಸುವರು. ಚಂಡಿಹಿಡಿದ ಮಗುವನ್ನು ಹೊಡೆದು ಅಳಿಸಿ ದಣಿಸಿ ಮಲಗಿಸುವರು. ಹೀಗೆ ಮಾಡುವುದರಿಂದ ನಿರಾಶೆಗೂ ನಿದ್ದೆಗೂ ಒಂದು ಸಂಬಂಧವೇರ್ಪಡುವುದು. ಇಂತಹವರು ಚಿಕ್ಕ ವಯಸ್ಸಿನಲ್ಲಿಯೂ ದೊಡ್ಡವರಾದ ಮೇಲೆಯೂ ತಮ್ಮ ಬಯಕೆಗಳು ಪೂರೈಸದೇ ಹೋದಾಗ ಮಲಗಿ ನಿದ್ರಿಸುವರು.

ಮಕ್ಕಳನ್ನು ಜೋಳಿ (ಬಟ್ಟೆಯ ತೊಟ್ಟಿಲು) ಅಥವಾ ಮರದ ತೊಟ್ಟಿಲಲ್ಲಿ ಮಲಗಿಸುವುದು ನಮ್ಮ ಮನೆಗಳಲ್ಲಿ ವಾಡಿಕೆಯಾಗಿದೆ. ಜೋಳಿಯು ಬಹಳ ಅನಾರೋಗ್ಯವಾದುದು. ಮಗುವಿಗೆ ಸಾಕಾದಷ್ಟು ಗಾಳಿ ಒದಗುವುದಿಲ್ಲ. ಮತ್ತು ಮಗು ಅಲುಗಾಡಲು ಅವಕಾಶವಿರುವುದಿಲ್ಲ. ತೊಟ್ಟಿಲು ಜೋಳಿಗಿಂತ ಉತ್ತಮವಾದುದಾದರೂ ಇವೆರಡೂ ಮಗುವಿಗೆ ನಿದ್ದೆಯ ವಿಚಾರದಲ್ಲಿ ಕೆಟ್ಟ ಅಭ್ಯಾಸಗಳನ್ನುಂಟುಮಾಡುವುವು. ತೂಗಿ ತೂಗಿ ಮಲಗಿಸುವ ಅಭ್ಯಾಸವನ್ನು ಮಾಡುವುದರಿಂದ ತೂಗದೇ ಹೋದರೆ ನಿದ್ದೆ ಮಾಡುವುದೇ ಇಲ್ಲ. ಅಲ್ಲದೆ ತಾಯಿಗೆ ಬೇಸರವಾದಾಗ, ಮಗು ಹಟ ಹಿಡಿದಾಗ ಅವನ್ನು ತೊಟ್ಟಿಲಲ್ಲಿ ಮಲಗಿಸಿ ತೂಗಿ ನಿದ್ರಿಸುವಂತೆ ಮಾಡುವರು. ಎಷ್ಟೋ ತಾಯಿತಂದೆಗಳು ತೊಟ್ಟಿಲಿಲ್ಲದಿದ್ದರೆ ಮಗುವನ್ನು ಬೆಳೆಸಲು ಸಾಧ್ಯವೇ ಇಲ್ಲವೆಂದು ನಂಬುವರು. ಆದರೆ ಇದು ನಿರಾಧಾರವಾದ ನಂಬಿಕೆ. ನಿಯಮದ ಪ್ರಕಾರ ಒಳ್ಳೆಯ ಹಾಸಿಗೆಯ ಮೇಲೆ

ಮಲಗಿಸಿದರೆ ಯಾವ ತೊಂದರೆಯೂ ಇಲ್ಲದೆ ಹಾಯಾಗಿ ನಿದ್ರಿಸು ವುದು.

ಸಾಧಾರಣವಾಗಿ ನಮ್ಮಲ್ಲಿರುವ ಮತ್ತೊಂದು ಅಭ್ಯಾಸವಾವು ದೆಂದರೆ— ಮಗುವನ್ನು ಪಕ್ಕದಲ್ಲಿಯೇ ಮಲಗಿಸಿಕೊಳ್ಳುವುದು. ಈ ಅಭ್ಯಾಸದಿಂದಲೇ ರಾತ್ರಿ ವೇಳೆಯಲ್ಲಿ ಮಗು ಅತ್ತಾಗಲೆಲ್ಲಾ ತಾಯಿಯು ಹಾಲುಣಿಸುವಳು. ಮಗುವು ಯಾವ ಕಾರಣದಿಂದ ಅಳುವುದೆಂದು ಸಹ ನೋಡದೆ ನಿದ್ದೆಗಣ್ಣಿನಲ್ಲಿಯೇ ಅದಕ್ಕೆ ಹಾಲು ಕೊಡುವಳು. ಇಷ್ಟೇ ಅಲ್ಲದೆ ತಾಯಿ ಮಕ್ಕಳಿಬ್ಬರೂ ಸರಿಯಾಗಿ ಕೈಕಾಲುಗಳನ್ನು ನೀಡಿ ಆರಾಮವಾಗಿ ನಿದ್ರಿಸಲು ಅವಕಾಶವಿಲ್ಲದೆ ದೇಹವನ್ನೆಲ್ಲಾ ಬಿಗಿ ಹಿಡಿಯಬೇಕಾಗುವುದು. ಬೆಳಗ್ಗೆ ಎದ್ದರೆ ವಿಶ್ರಾಂತಿ ಪೂರ್ಣವಾಗಿಲ್ಲದಿರುವುದರಿಂದ ರೇಗುವ ಸ್ವಭಾವವುಳ್ಳವ ರಾಗುವರು. ಗಂಡಹೆಂಡಿರ ಮತ್ತು ಅತ್ತೆಸೊಸೆಯರ ಜಗಳಕ್ಕೆ ಇದೂ ಒಂದು ಕಾರಣವಾಗುವುದು. ಮತ್ತು ಬೆಳೆದರೂ ಇನ್ನೊಬ್ಬರ ಜೊತೆಯಲ್ಲಿ ಮಲಗುವ ದುರಭ್ಯಾಸವೇ ನಿಂತುಬಿಡುವುದು. ಒಂಟೇ ಮಲಗುವುದಕ್ಕೆ ಹೆದರುವುದು. ಆದುದರಿಂದ ಹುಟ್ಟಿದ ದಿನದಿಂದಲೇ ಮಗುವನ್ನು ಬೇರೆ ಹಾಸಿಗೆಯಲ್ಲಿ ಮಲಗಿಸಬೇಕಾದುದು ಅತ್ಯಗತ್ಯ. ಅನುಕೂಲ ಅವಕಾಶಗಳಿದ್ದರೆ ಮಗುವನ್ನು ಬೇರೆ ಕೊಠಡಿಯಲ್ಲಿ ಮಲಗಿಸುವುದು ಇನ್ನೂ ಉತ್ತಮ.

ಹೀಗೆ ನಿದ್ರೆಗೆ ಸಂಬಂಧಪಟ್ಟ ಅಭ್ಯಾಸಗಳು ಒಂದು ವ್ಯಕ್ತಿಯ ಆರೋಗ್ಯ ಗುಣ ಸ್ವಭಾವ ಮುಂತಾದ ಲಕ್ಷಣಗಳೆಲ್ಲದರ ಮೇಲೆ ತಮ್ಮ ಪ್ರಭಾವವನ್ನು ಬೀರುವುವು.

೨. **ಮಲಮೂತ್ರ ವಿಸರ್ಜನೆ**:—ಮಲಮೂತ್ರ ವಿಸರ್ಜನೆಯೂ ತಂದೆ ತಾಯಿಗಳು ಹೇಳಿಕೊಡುವ ಅಭ್ಯಾಸಗಳಿಗೆ ಒಳಪಡು ವುದು. ಆದರೆ ಎಷ್ಟೋ ಜನರು ಮಕ್ಕಳು ತಮ್ಮಷ್ಟಕ್ಕೆ ತಾವೇ ಅವ

ಸರವಾದಾಗ ಮಲಮೂತ್ರಗಳನ್ನು ವಿಸರ್ಜಿಸುವರೆಂದು ತಿಳಿದಿರುವರು. ಹೊತ್ತಿಗೆ ಸರಿಯಾಗಿ ಮಗು ಈ ಕ್ರಿಯೆಗಳನ್ನು ಮಾಡಿದರೆ ಅದಕ್ಕೆ ತಾಯಿ ತಂದೆಗಳ ಜಾಗರೂಕತೆಯೇ ಕಾರಣ. ಸಣ್ಣ ವಯಸ್ಸಿನಲ್ಲಿ ಹಾಲು ಕುಡಿಸಿದ ಮೇಲೆ ಮಗು ಮಲ ಮೂತ್ರ ವಿಸರ್ಜನೆ ಮಾಡಲು ಅವಕಾಶವನ್ನು ಏರ್ಪಡಿಸಬೇಕು. ಅನುಭವವಿರುವ ತಾಯಂದಿರು ಮೂರು ನಾಲ್ಕು ತಿಂಗಳ ಮಗುವಿಗೆ ಹಾಲು ಕುಡಿಸಿದ ಮೇಲೆ ತಮ್ಮ ಕಾಲುಗಳ ಮೇಲೆ ಕೂಡಿಸಿ ಮಲಮೂತ್ರ ವಿಸರ್ಜನೆಯು ಸರಾಗವಾಗಿ ನಡೆಯುವಂತೆ ಅವಕಾಶವನ್ನೇರ್ಪಡಿಸುವರು. ಹೀಗೆ ಮಾಡದೇ ಹೋದರೆ ಪದೇ ಪದೇ ಉಚ್ಚೆಯಿಂದ ಒದ್ದೆಯಾಗಿರುವ ಬಟ್ಟೆಗಳನ್ನು ಬದಲಾಯಿಸುವ ಕೆಲಸವು ಹೆಚ್ಚುವುದು. ಅಲ್ಲದೆ ಸಮಯಕ್ಕೆ ಸರಿಯಾಗಿ ಒದ್ದೆಯಾದ ಬಟ್ಟೆಯನ್ನು ಬದಲಾಯಿಸದಿದ್ದರೆ ಮಗುವಿನ ಮೈಮೇಲೆ ಹುಣ್ಣುಗಳುಂಟಾಗುವುವು. ಪ್ರತಿ ದಿನವೂ ಬೆಳಗ್ಗೆ ಮಗುವಿಗೆ ಹಾಲು ಕೊಟ್ಟನಂತರ ಮಲವಿಸರ್ಜನೆ ಮಾಡಲು ಅವಕಾಶಗಳನ್ನು ಒದಗಿಸಿದರೆ ಮೂರು ನಾಲ್ಕು ತಿಂಗಳು ತುಂಬುವುದರೊಳಗೆ ಈ ಕ್ರಮವನ್ನು ಮಗು ಕಲಿಯುವುದು. ಹಣವಂತರು, ಮಕ್ಕಳು ಮಲವಿಸರ್ಜನೆ ಮಾಡಲು ಕಮ್ಮೋಡುಗಳನ್ನಿಡುವರು. ಬಡವರೂ ಸಹ ಹೀಗೆ ನಿರ್ದಿಷ್ಟವಾದ ಹೊತ್ತಿನಲ್ಲಿ ನಿರ್ದಿಷ್ಟವಾದ ವಸ್ತುವಿನಲ್ಲಿ ಮಲವಿಸರ್ಜನೆ ಮಾಡಲು ಹೇಳಿಕೊಡಲು ಪ್ರಯತ್ನಿಸಬೇಕು. ಹೊತ್ತಿಗೆ ಸರಿಯಾಗಿ ಒಂದು ಸ್ಥಳದಲ್ಲಿ ಒಂದು ಚಿಕ್ಕ ಮಡಕೆಯನ್ನು ಒಂದು ಮರದ ಅಥವಾ ಬೊಂಬಿನ ತಿಕಡಿಯಲ್ಲಿಟ್ಟು ಅದರಲ್ಲಿ ಮಲವಿಸರ್ಜನೆ ಮಾಡುವಂತೆ ಅಭ್ಯಾಸ ಮಾಡಿಸಬೇಕು. ಹೀಗೆ ಮಾಡುವುದರಿಂದ ಮನೆ ಮತ್ತು ಮನೆಯ ಸುತ್ತಮುತ್ತಲೂ ಪರಿಶುದ್ಧವಾಗಿರುವುದೇ ಅಲ್ಲದೆ ಚಿಕ್ಕಂದಿನಿಂದ ಸಾಯುವ ವರೆಗೂ ಹೊಟ್ಟೆಕಟ್ಟುವ ಸಂಭವವೂ ಇರುವುದಿಲ್ಲ.

ದೊಡ್ಡವರಲ್ಲಿ ಮಲವಿಸರ್ಜನೆಯು ಸರಿಯಾಗಿ ಆಗದೆ ತೊಂದರೆ ಪಡುವುದಕ್ಕೆ ಚಿಕ್ಕಂದಿನಲ್ಲಿ ಸರಿಯಾದ ಅಭ್ಯಾಸವಿಲ್ಲದಿರುವುದೇ ಕಾರಣ. ಚಿಕ್ಕ ವಯಸ್ಸಿನಿಂದಲೂ ಬೆಳಗ್ಗೆ ಎದ್ದ ಕೂಡಲೇ ಮಲ ವಿಸರ್ಜನೆಯನ್ನು ಮಾಡುವ ಅಭ್ಯಾಸವನ್ನು ಮಾಡಿಸಿದರೆ ಈ ತೊಂದರೆ ಇರುವುದೇ ಇಲ್ಲ.

ಮೂತ್ರವಿಸರ್ಜನೆಯೂ ಹೀಗೆಯೇ ಒಂದು ಕ್ರಮದಿಂದ ನಡೆ ಯುವ ಹಾಗೆ ಅಭ್ಯಾಸ ಮಾಡಿರಬೇಕು. ಆದರೆ ಮೂತ್ರವಿಸರ್ಜ ನೆಯ ಅಭ್ಯಾಸವು ಸ್ವಲ್ಪ ಕಾಲವನ್ನು ತೆಗೆದುಕೊಳ್ಳುವುದು. ಸಾಧಾ ರಣವಾಗಿ ಮೂತ್ರವಿಸರ್ಜನೆಯು ಹತೋಟಿಗೆ ಬರಲು ಮಗುವಿಗೆ ಒಂದೂವರೆ-ಎರಡು ವರ್ಷವಾದರೂ ಆಗಬೇಕು. ಬೆಳಗಿನ ಹೊತ್ತು ಎಚ್ಚರವಾಗಿರುವಾಗ ಮೂತ್ರವಿಸರ್ಜನೆಯ ಹತೋಟಿಯು ಬೇಗನೆ ಬರುವುದು. ಇಲ್ಲಿಯೂ ಸಹ ಕಾಲ, ಸ್ಥಳ, ಸನ್ನಿವೇಶ ಮುಂತಾ ದುವು ಏಕರೀತಿಯಿಂದ ಒದಗಬೇಕು. ಆದರೆ ರಾತ್ರಿಯ ವೇಳೆ ಹಾಸಿಗೆಯನ್ನು ಒದ್ದೆಮಾಡುವುದನ್ನು ಬಿಡಲು ಸ್ವಲ್ಪಕಾಲ ಹಿಡಿಯು ವುದು. ತಾಯಿಯು ಪ್ರತಿನಿತ್ಯವೂ ಮಗು ಮಲಗುವುದಕ್ಕೆ ಮುಂಚೆ ಮೂತ್ರವಿಸರ್ಜನೆಯನ್ನು ಮಾಡಿಸಿ ಮಲಗಿಸಿದರೆ ಕ್ರಮೇಣ ಒಂದೂ ವರೆ-ಎರಡು ವರ್ಷಗಳಿಗೆ ಹತೋಟಿಯುಂಟಾಗುವುದು. ರಾತ್ರಿ ನಿರಾತಂಕವಾಗಿ ಮಗು ನಿದ್ರೆಮಾಡುವುದು ಹೆಚ್ಚಿದಂತೆಲ್ಲಾ ಮೂತ್ರ ಕೋಶದ ಮೇಲಿನ ಹತೋಟಿಯೂ ಹೆಚ್ಚುವುದು.

ಕೆಲವು ಮಕ್ಕಳು ವಯಸ್ಸು ಹೆಚ್ಚುತ್ತ ಹೋದರೂ ರಾತ್ರಿ ಯಲ್ಲಿ ಹಾಸಿಗೆಯ ಮೇಲೆಯೇ ಮೂತ್ರವಿಸರ್ಜನೆ ಮಾಡಿಕೊಳ್ಳು ವರು. ಎರಡು-ಮೂರು ವರ್ಷ ವಯಸ್ಸಿನೊಳಗೆ ಈ ಹತೋಟಿ ಯುಂಟಾಗದಿದ್ದರೆ ಇದಕ್ಕೆ ಯಾವುದೋ ಇತರ ಕಾರಣಗಳಿರ ಬೇಕೆಂದು ತಿಳಿಯಬೇಕು. ಕೆಲವು ಸಮಯದಲ್ಲಿ ದೈಹಿಕ ಕಾರಣ

ಗಳಿಂದುಂಟಾಗುತ್ತದು. ಆದುದರಿಂದ ಹೀಗೆ ಮಾಡುವ ಮಗುವನ್ನು ವೈದ್ಯರಿಗೆ ತೋರಿಸಿ ಪರೀಕ್ಷಿಸಬೇಕು. ಹಾಗೆ ಮಾಡಿದ ಮೇಲೆಯೂ ನಿಲ್ಲದಿದ್ದರೆ ಮಾನಸಿಕ ಕಾರಣಗಳಿಂದ ಉಂಟಾಗಿರಬೇಕೆಂದು ಊಹಿಸಿ ವರ್ತನಾಚಿಕಿತ್ಸಾಲಯ (ಚೈಲ್ಡ್ ಗೈಡೆನ್ಸ್ ಕ್ಲಿನಿಕ್) ಗಳಿಗೆ ಕರೆದುಕೊಂಡು ಹೋಗಿ ಚಿಕಿತ್ಸೆ ಮಾಡಿಸಬೇಕು. ಮಗುವಿನಲ್ಲಿ ಕಾರಣಾಂತರಗಳಿಂದ ಒಳತೋಟೆಯುಂಟಾದರೆ ರಾತ್ರಿಯ ವೇಳೆ ಹಾಸಿಗೆಯಲ್ಲಿ ಉಚ್ಚೆ ಹೊಯ್ದುಕೊಳ್ಳುವುದು, ತಂದೆ ತಾಯಿಗಳು ಜಗಳವಾಡುವುದು, ಮಲತಾಯಿಯ ಕಠಿಣತೆ, ಉಪಾಧ್ಯಾಯರ ಮತ್ತು ಹಿರಿಯರ ಹೆದರಿಕೆ, ಆಗದಿದ್ದವರ ಮನೆಯಲ್ಲಿ ಮಲಗಿರುವುದು, ಮನೆಯಲ್ಲಿರುವ ಇತರ ಮಕ್ಕಳ ಮೇಲಿನ ಆಸೂಯೆ, ಇವೇ ಮುಂತಾದುವು ಕಾರಣವಾಗಿರಬಹುದು. ಕಾರಣವನ್ನರಿತು ಸನ್ನಿವೇಶಗಳನ್ನು ಬದಲಾಯಿಸಿ ಶ್ರದ್ಧೆಯಿಂದ ನೋಡಿಕೊಂಡರೆ ಈ ದುರಭ್ಯಾಸವನ್ನು ಹೋಗಲಾಡಿಸಬಹುದು.

೩. **ಆಹಾರ :**—ಆಹಾರವನ್ನು ತೆಗೆದುಕೊಳ್ಳುವುದು ಸ್ವಾಭಾವಿಕವಾದರೂ ಇತರ ವರ್ತನೆಗಳಂತೆ ಈ ವರ್ತನೆ ಸಹ ತಾಯಿತಂದೆಗಳು ಮಾಡಿಸಿರುವ ಅಭ್ಯಾಸಗಳ ಮೇಲೆ ನಿಂತಿರುವುದು. ಹೊತ್ತಿಗೆ ಸರಿಯಾಗಿ ಬಡಿಸಿದುದನ್ನು ತೃಪ್ತಿಯಿಂದ ಒಂದು ವ್ಯಕ್ತಿ ಊಟಮಾಡಿದರೆ ಈ ವರ್ತನೆ ಚಿಕ್ಕಂದಿನಲ್ಲಿ ತಾಯಿತಂದೆಗಳು ಕಲಿಸಿದ ಸದಭ್ಯಾಸವನ್ನು ಸೂಚಿಸುತ್ತದೆ. ಎಷ್ಟೋ ಮಕ್ಕಳು ಊಟಕ್ಕೆ ಕುಳಿತು ಸರಿಯಾಗಿ ಊಟಮಾಡದೆ ಅತ್ತು, ಏಟುತಿಂದು ಎದ್ದುಹೋಗುವರು. ಇದಕ್ಕೆ ಕಾರಣ ತಾಯಿತಂದೆಗಳು ಮಾಡಿಸಿರುವ ದುರಭ್ಯಾಸ. ಒಂದು ವ್ಯಕ್ತಿಯಲ್ಲಿರುವ ಸ್ವಾವಲಂಬನೆ, ಪರೋಪಕಾರ ಬುದ್ಧಿ, ಸಹನೆ, ಸಹಕಾರ; ಹೊಟ್ಟೆಕಿಚ್ಚು, ಸ್ವಾರ್ಥಪರತೆ, ಆತುರತೆ ಮುಂತಾದ ಗುಣಗಳ ಮೇಲೆ ಆಹಾರದ

ಅಭ್ಯಾಸಗಳು ಪ್ರಭಾವವನ್ನು ಬೀರುವುವು. ಆದುದರಿಂದ ಶಾಲೆಯಲ್ಲಿ ಅಥವಾ ಮನೆಯಲ್ಲಿ ವಿಪರೀತ ವರ್ತನೆಯನ್ನು ತೋರಿಸುವ ಮಗುವನ್ನು ತಿದ್ದಬೇಕಾದರೆ, ಅದರ ಆಹಾರದ ವಿಷಯಕ್ಕೆ ಸಂಬಂಧಪಟ್ಟ ವರ್ತನೆಯನ್ನು ಪರಿಶೀಲಿಸುವುದು ಬಹಳ ಮುಖ್ಯವೆಂದು ಪರಿಗಣಿಸಲಾಗಿದೆ. ಹುಟ್ಟಿದ ಮೊದಲನೆಯ ವಾರದಿಂದಲೂ ಗಡಿಯಾರವನ್ನು ನೋಡಿಕೊಂಡು ಮೂರುಗಂಟೆಗೊಂದು ಸಲ ಹಾಲು ಕುಡಿಸಬೇಕೆಂದು ವೈದ್ಯರು ಹೇಳಿರುವರು. ಈ ಅಭ್ಯಾಸ ಮಗುವಿಗೆ ಆರೋಗ್ಯಕರವಾದುದು. ಮಾತ್ರವೇ ಅಲ್ಲದೆ ಅದರ ವರ್ತನೆಯ ಮೇಲೆ ಪರಿಣಾಮವನ್ನುಂಟುಮಾಡುವುದು . ಸಾಧಾರಣವಾಗಿ ಮಗು ಅತ್ತಾಗಲೆಲ್ಲಾ ಹಾಲು ಕುಡಿಸುವುದು ವಾಡಿಕೆಯಾಗಿದೆ. ಇದರಿಂದ ಮಗುವಿಗೆ ಅನಾರೋಗ್ಯ ಉಂಟಾಗುವುದು ಮಾತ್ರವೇ ಅಲ್ಲದೆ ಒಂದು ದುರಭ್ಯಾಸವನ್ನುಂಟುಮಾಡಿದ ಹಾಗಾಗುವುದು. ತನಗೆ ಅಸ್ವಸ್ಥತೆಯುಂಟಾದಾಗಲೆಲ್ಲಾ ಆಹಾರವನ್ನು ಪಡೆಯಬೇಕೆಂಬ ಇಚ್ಛೆಯುಂಟಾಗುವುದು. ಆಹಾರವು ಸಿಕ್ಕದಿದ್ದರೆ ಚಂಡಿತನ ತಲೆತೋರುವುದು. ಈ ಚಂಡಿತನ ಇತರ ಅಂಶಗಳಿಗೂ ಹರಡಿ ತಾಯಿತಂದೆಗಳಿಗೆ ಸಹಿಸಲಾರದಷ್ಟು ಕಷ್ಟವನ್ನುಂಟುಮಾಡುವುದು.

ಮಗು ಬೆಳೆಯುತ್ತ ಬೆಳೆಯುತ್ತ ಎದೆಹಾಲಿನ ಜೊತೆಗೆ ಹಣ್ಣಿನ ರಸವನ್ನೂ ದಿನಕ್ಕೆ ಒಂದೆರಡು ಸಲ ಕೊಡುವುದು ಉತ್ತಮ. ಮತ್ತು ಎಂಟು ಒಂಬತ್ತು ತಿಂಗಳ ವಯಸ್ಸಿನಲ್ಲಿಯೇ ದಿನಕ್ಕೆ ಒಂದು ಸಲ ಹಸುವಿನ ಹಾಲನ್ನು ರೂಢಿ ಮಾಡುವುದು ಮೇಲು. ಹೀಗೆ ಮಾಡಿದರೆ ಮಗುವಿಗೆ ಒಂದು ವರ್ಷ ತುಂಬುವುದರೊಳಗಾಗಿ ಕ್ರಮೇಣ ಎದೆಹಾಲನ್ನು ಪೂರ್ತಿಯಾಗಿ ನಿಲ್ಲಿಸಲು ಸಾಧ್ಯವಾಗುವುದು. ಎದೆಹಾಲನ್ನು ಒಂದು ವರ್ಷ ವಯಸ್ಸಿನಲ್ಲಿಯೇ ಬಿಡಿಸುವುದು ತಾಯಿ ಮಕ್ಕಳಿಬ್ಬರಿಗೂ ಆರೋಗ್ಯಕರವಾದುದು. ಅಲ್ಲದೆ ಮಗುವಿನ ವರ್ತ

ವಣಿಗೆಗೆ ಅಗತ್ಯ. ಎದೆ ಹಾಲನ್ನೇ ಕುಡಿಯುತ್ತಿದ್ದರೆ ಮಗುವಿನ ಪೋಷಣೆಗೆ ಅಗತ್ಯವಾದ ವಸ್ತುಗಳು ಸಾಕಾದಷ್ಟು ಲಭಿಸದಿರುವುದೇ ಅಲ್ಲದೆ ಅದರ ಆಶೋತ್ತರಗಳೆಲ್ಲವೂ ತಾಯಿಯನ್ನೇ ಅವಲಂಬಿಸಿರುವುವು. ಆದುದರಿಂದ ಮಗುವಿನ ಚಂಡಿತನ ಹೆಚ್ಚುವುದು. ನೆರೆ ಹೊರೆಯ ಮಕ್ಕಳ ಜೊತೆಯಲ್ಲಿ ಆಡಿಕೊಂಡಿರಲು ಇಚ್ಛಿಸುವುದಿಲ್ಲ. ತಾಯಿಯನ್ನು ಸ್ವಲ್ಪ ಹೊತ್ತಾದರೂ ಬಿಟ್ಟಿರುವುದಿಲ್ಲ. ಇದರಿಂದ ತಾಯಿಯ ಕೆಲಸಕಾರ್ಯಗಳಿಗೆಲ್ಲಾ ಅಡ್ಡಿಯುಂಟಾಗುವುದು.

ಹೊತ್ತಿಗೆ ಸರಿಯಾಗಿ ಹಾಲು ಕೊಡುವುದು ಎಷ್ಟು ಆವಶ್ಯಕವೋ, ಹೊತ್ತಿಗೆ ಸರಿಯಾಗಿ ಊಟ ಮಾಡಿಸುವುದೂ ಅಷ್ಟೇ ಆವಶ್ಯಕವಾದುದು. ಊಟಕ್ಕೆ ಇಡುವಾಗ ಮಗು ಊಟ ಮಾಡಿತೆಂಬ ಸಂತೋಷವನ್ನಾಗಲಿ, ಮಾಡದಿದ್ದರೆ ಕೋಪ, ವ್ಯಸನಗಳನ್ನಾಗಲಿ ಸೂಚಿಸಬಾರದು. ಸಂತೋಷವನ್ನು ಸೂಚಿಸಿದರೆ ಮಗು ಕ್ರಮೇಣ ತಂದೆ ತಾಯಿಗಳನ್ನು ಸಂತೋಷಗೊಳಿಸುವುದಕ್ಕಾಗಿಯೇ ಊಟ ಮಾಡುವುದನ್ನು ಕಲಿಯುವುದು. ಕೋಪ ವ್ಯಸನಗಳನ್ನು ಸೂಚಿಸಿದರೆ ಮಗು ಹೆದರಿ ಊಟವನ್ನು ಸರಿಯಾಗಿ ಮಾಡುವುದಿಲ್ಲ. ಮೊದಲಿನಿಂದಲೂ ಹಸಿವಿಗಾಗಿ ಊಟಮಾಡುವ ಮನೋವೃತ್ತಿಯುಂಟಾಗುವಂತೆ ಮಾಡಬೇಕು, ಮಗು ಊಟ ಮಾಡಲಿಲ್ಲವಲ್ಲಾ ಎಂದು ತಾಯಿಯು ಆತುರತೆಯನ್ನು ತೋರಿಸಿದರೆ ಮಗು ಅದರಿಂದಲೇ ತೃಪ್ತಿಯನ್ನು ಹೊಂದಿ ತಾಯಿ ತನ್ನ ಕಡೆಯೇ ಗಮನವನ್ನೆಲ್ಲಾ ಇಟ್ಟು ನೋಡಿಕೊಳ್ಳುವಳೆಂದು ತಿಳಿದು ಊಟ ಮಾಡುವಾಗಲೆಲ್ಲಾ ತೊಂದರೆಯನ್ನು ಕೊಡುವುದು. "ಹಸಿವಿದ್ದರೆ ಊಟಮಾಡು ಇಲ್ಲದಿದ್ದರೆ ಬಿಡು" ಎಂದು ಸ್ವಲ್ಪ ಸ್ಥಿರತೆಯಿಂದ ಹೇಳಿ ಉದಾಸೀನತೆಯನ್ನು ತೋರಿಸಿದರೆ ಮಗು ತನ್ನಷ್ಟಕ್ಕೆ ತಾನೆ ಹೊಟ್ಟೆತುಂಬ ಊಟ ಮಾಡುವುದು. ಇದನ್ನು ಬಿಟ್ಟು ಎಷ್ಟೋ ತಾಯಂದಿರು ಕೋಪವನ್ನು

ತೋರಿಸುವರು, ಹೊಡೆಯುವರು; ಮಗುವಿಗೆ ಊಟಮಾಡುವ ಸಮಯದಲ್ಲಿ ಗೊಂಬೆಗಳನ್ನು ಕೊಡುವರು, ಸುಳ್ಳು ಆಸೆಯನ್ನು ತೋರಿಸುವರು. ಹೀಗೆ ಮಾಡುವುದರಿಂದ ಅವರ ಕಷ್ಟ ಕಡಮೆಯಾಗುವುದಕ್ಕೆ ಬದಲಾಗಿ ದಿನದಿನಕ್ಕೂ ಹೆಚ್ಚುತ್ತ ಹೋಗುವುದು.

ಕೆಲವು ಮಕ್ಕಳು ಕೆಲವು ವಿಧವಾದ ಆಹಾರಗಳನ್ನು ತೆಗೆದುಕೊಳ್ಳಲು ಇಷ್ಟಪಡುವುದಿಲ್ಲ. ಇದಕ್ಕೆ ಅನೇಕ ವೇಳೆ ತಾಯಿ ತಂದೆಗಳೇ ಕಾರಣ. ಮಗು ಊಟಮಾಡದೇ ಹೋದರೆ ಬಂದವರೊಡನೆ, "ನಮ್ಮ ಮಗುವಿಗೆ ಆ ತಿಂಡಿ ಎಂದರೆ ಸೇರುವುದೇ ಇಲ್ಲ" "ಇದನ್ನು ಕಂಡರೆ ನಮ್ಮ ರಾಮುವಿಗೆ ಪ್ರಾಣ" ಎಂದು ಹೇಳಿ ಹೇಳಿ ಮಕ್ಕಳಿಗೆ ಊಟದ ವಿಚಾರದಲ್ಲಿ ಇಚ್ಛೆಗಳುಂಟಾಗುವಂತೆ ಮಾಡುವರು.

ಹಸಿವಿದ್ದರೆ ಊಟ ಸೇರುವುದು ಸತ್ಯ. ಆದರೆ ಅನೇಕರು ಹಸಿವಿಗಾಗಿ ಅಲ್ಲ ಊಟಮಾಡುವುದು—ಅಡಿಗೆಯಾಯಿತೆಂದೋ ಇಲ್ಲವೇ ಊಟದ ವೇಳೆ ಬಂದಿತೆಂದೋ ಅಥವಾ ಒಳ್ಳೆಯ ಪದಾರ್ಥಗಳನ್ನು ಅಡಿಗೆ ಮಾಡುತ್ತಿರುವಾಗ ಬರುವ ಸುವಾಸನೆಯಿಂದ ಆಸೆಪಟ್ಟೋ ಊಟಕ್ಕೆ ಏಳುವರು. ಇದನ್ನು ಗಮನದಲ್ಲಿಟ್ಟು ಚಿಕ್ಕ ವಯಸ್ಸಿನಿಂದಲೂ ಮಗುವಿಗೆ ಸರಿಯಾದ ಅಭ್ಯಾಸವನ್ನು ಹೇಳಿಕೊಟ್ಟರೆ ತಾಯಿಗೂ ಮಗುವಿಗೂ ಇಬ್ಬರಿಗೂ ಅನುಕೂಲ.

ಮಗುವಿಗೆ ಒಂದೂವರೆ ವರ್ಷವಾದರೆ ತನ್ನ ಊಟವನ್ನು ತಾಯಿಯ ಸಹಾಯವಿಲ್ಲದೆ ತಾನೇ ಮಾಡುವುದೆಂದು ಹಟ ಹಿಡಿಯಲಾರಂಭಿಸುವುದು. ಇದರಿಂದ ಮಗು ಊಟವನ್ನು ಚೆಲ್ಲಿ ಕೈ, ಬಾಯಿ, ಬಟ್ಟೆಗಳನ್ನು ಹೊಲಸು ಮಾಡಿಕೊಳ್ಳುವುದು ಮತ್ತು ತಾಯಿಯ ಕೆಲಸಕ್ಕೂ ಅಡ್ಡಿಯುಂಟುಮಾಡಿ ಆಕೆಗೆ ಕಾಲಹರಣವಾಗುವಂತೆ ಮಾಡುವುದು. ಆದುದರಿಂದ ತಾಯಿಗೆ ಕೋಪವುಂಟಾ

ಗುವುದು. ಆದರೆ ಮಗುವಿನ ಇಚ್ಛೆಯು ಅದರ ಬೆಳವಣಿಗೆಗೆ ಅತಿ ಮುಖ್ಯವಾದುದು. ತಾಯಂದಿರು ಜ್ಞಾಪಕದಲ್ಲಿಟ್ಟಿರಬೇಕಾದ ಒಂದು ಆಗತ್ಯವಾದ ವಿಷಯವೇನೆಂದರೆ—ಮಗು ಒಂದು ಪ್ರತ್ಯೇಕ ವ್ಯಕ್ತಿ, ಅದರ ಬೆಳವಣಿಗೆಯು ಈ ವ್ಯಕ್ತಿತ್ವವನ್ನು ಹೊರಬೀಳಿಸುವುದು. ತಾಯಿಯು ತನ್ನ ಕೈಲಾದಷ್ಟು ಮಟ್ಟಿಗೆ ಈ ಗುರಿಯನ್ನು ಮನಸ್ಸಿನಲ್ಲಿಟ್ಟು ಮೊದಲಿನಿಂದಲೂ ಮಗು ತನ್ನ ವ್ಯಕ್ತಿತ್ವವನ್ನೂ, ಸ್ವಾತಂತ್ರ್ಯವನ್ನೂ ಪಡೆಯಲು ಅನುಕೂಲಿಸುವಂತೆ ಸಹಕರಿಸಬೇಕು. ಅಮೆರಿಕಾ ದೇಶದಲ್ಲಿ ಕಂಡು ಬಂದಿರುವ ಹಾಗೆ ಸಾಧಾರಣವಾಗಿ ಶೇ. ೮೭ರಷ್ಟು ಮಂದಿ ಮಕ್ಕಳು ಎರಡು ವರ್ಷ ವಯಸ್ಸಿನಲ್ಲಿಯೇ ಇತರರ ಸಹಾಯವಿಲ್ಲದೆ ತಮ್ಮ ಊಟವನ್ನು ತಾವೇ ಮಾಡಿಕೊಳ್ಳುವರು. ಆ ವಯಸ್ಸಿನಲ್ಲಿ ಕೈಚತುರತೆಯೂ, ಬೆರಳುಗಳ ಮೇಲಿನ ಹತೋಟಿಯೂ ಸಾಕಾದಷ್ಟು ಬಂದಿರುವುದರಿಂದ ಮಗುವಿಗೆ ತನ್ನ ಕೆಲಸವನ್ನು ತಾನೇ ಮಾಡಿಕೊಳ್ಳುವುದರಲ್ಲಿ ಉತ್ಸಾಹ ಹೆಚ್ಚುವುದು. ಇದು ಸಫಲವಾಗಲು ತಾಯಿ ಸಹಕರಿಸಬೇಕು.

ಕೆಲವು ಮಕ್ಕಳಲ್ಲಿ ಮೊದಲ ತಿಂಗಳಲ್ಲಿಯೇ ಬೆರಳು ಬಾಯಲ್ಲಿಡುವುದನ್ನು ಕಾಣುವೆವು. ಆಗತಾನೆ ಹಾಲು ಕುಡಿದು ಮಲಗಿರುವ ಮಗುವಿನ ದೇಹದ ಯಾವ ಭಾಗವನ್ನೇ ಆಗಲಿ ಪ್ರಚೋದಿಸಿದರೆ ಮಗುವು ಪುನಃ ಹಾಲು ಕುಡಿಯುವಂತೆ ತುಟಿಗಳನ್ನು ಅದುರಿಸುವುದು. ಆದುದರಿಂದ ಅಕಸ್ಮಾತ್ತಾಗಿ ಆ ಸಮಯದಲ್ಲಿ ಬೆರಳು ಬಾಯಿಯ ಹತ್ತಿರ ಬಂದರೆ ಅದನ್ನೇ ಚೀಪುವುದು. ಪದೇ ಪದೇ ಮಾಡುವುದರಿಂದ ಅದು ರೂಢಿಯಾಗುವುದು, ಆದರೆ ಈ ಕ್ರಿಯೆಯು ಒಂದೆರಡು ತಿಂಗಳಲ್ಲೇ ಅಳಿಸಿಹೋಗುವುದು. ಮತ್ತೆ ಕೆಲವು ಮಕ್ಕಳು ವರ್ಷಗಳು ಕಳೆದರೂ ಬೆರಳು ಚೀಪುವುದನ್ನು ಬಿಡುವುದಿಲ್ಲ. ಇದಕ್ಕೆ ಅನೇಕ ಕಾರಣಗಳಿರುವುವು. ಕುಡಿದ ಹಾಲು ಹೊಟ್ಟೆಗೆ

ಸಾಲದಿರುವುದರಿಂದಲೋ, ಆಹಾರವು ಪುಷ್ಟಿಕರವಾಗಿಲ್ಲದಿರುವುದ ರಿಂದಲೋ ಈ ಪ್ರತಿಕ್ರಿಯೆಯುಂಟಾಗುವುದು. ಕೆಲವು ಕುಟುಂಬ ಗಳಲ್ಲಿ ತಾಯಿ ತಂದೆಗಳೇ ಈ ದುರಭ್ಯಾಸವನ್ನು ಕಲಿಸುವರು. ಅಳು ತ್ತಿರುವ ಮಗುವಿನ ಬಾಯಲ್ಲಿ ಬೆರಳನ್ನೋ, ರಬ್ಬರು ನಿಪ್ಪಲನ್ನೋ ಇಟ್ಟು ಚೀಪುತ್ತ ಸುಮ್ಮನಿರುವಂತೆ ಮಾಡುವರು. ಇದರಿಂದ ಮಗು ವಿಗೆ ಹಸಿವಾದಾಗ ಅಥವಾ ನಿರಾಶೆಯುಂಟಾದಾಗ ಈ ಚೀಪುವ ಪದ್ಧತಿಯನ್ನು ರೂಢಿಸಿಕೊಳ್ಳುವುದು. ಇಂತಹ ಮಕ್ಕಳು ತಮ್ಮ ಕಾರ್ಯಕಲಾಪಗಳಲ್ಲಿ ಶ್ರದ್ಧೆಯಿಡದೆ ಮಂಕಾಗಿರುವರು. ಸ್ವಪ್ರ ಯತ್ನವನ್ನು ಬಿಟ್ಟು ಪರಾವಲಂಬಿಗಳಾಗುವರು. ಈ ದುರಭ್ಯಾಸ ವನ್ನು ಆದಷ್ಟು ಬೇಗನೆ ಹೋಗಲಾಡಿಸಬೇಕು. ಒಂದೆರಡು ದಿನ ಮಗು ಹೀಗೆ ಬೆರಳನ್ನು ಬಾಯಲ್ಲಿಟ್ಟಾಗ ಪ್ರತಿ ಸಲವೂ ತೆಗೆಯುತ್ತ ಬಂದರೆ ಈ ರೂಢಿ ತಪ್ಪಿಹೋಗುವುದು. ಹೀಗೆ ಮಾಡುವ ನಾಲ್ಕಾರು ತಿಂಗಳ ಮಗುವಿನ ಕೈಗೆ ಒಂದು ಗಿಲಿಕೆಯನ್ನಾಗಲಿ ಆಟಿಕೆಯನ್ನಾಗಲಿ ಕೊಟ್ಟರೆ ಅದರ ಮೇಲೆ ಗಮನವನ್ನಿಟ್ಟು ಬೆರಳು ಚೀಪುವುದನ್ನು ಮರೆಯುವುದು ಸಾಕಾದಷ್ಟು ಆಹಾರ ಮಗುವಿಗೆ ಒದಗುತ್ತಿರುವುದೇ ಇಲ್ಲವೇ ಎಂಬುದನ್ನು ಪರೀಕ್ಷಿಸಿ ಪರಿಹಾರವನ್ನು ಏರ್ಪಡಿಸಬೇಕು. ಇನ್ನೂ ಹೆಚ್ಚು ವಯಸ್ಸಿನ ಮಗುವಾದರೆ ಬಾಯಲ್ಲಿ ಬೆರಳಿಟ್ಟ ಪ್ರತಿಸಲವೂ ಚಿಟಕಿ ಹಾಕಿ ಹೋಗಲಾಡಿಸಬಹುದು.

೪. **ಸ್ನಾನ**—ಅನೇಕ ಮಕ್ಕಳಿಗೆ ಸ್ನಾನ ಮಾಡಬೇಕೆಂದರೆ ಸಂಕಟ. ಸ್ನಾನ ಮಾಡಿಸುವವರು ಅನುಸರಿಸುವ ರೀತಿಯೇ ಇದಕ್ಕೆ ಕಾರಣ. ಎಷ್ಟೋ ವೇಳೆ ಚಿಕ್ಕ ಮಕ್ಕಳಿಗೆ ಸ್ನಾನ ಮಾಡಿಸುವಾಗ ಅತಿ ಹೆಚ್ಚು ಬಿಸಿಯಾಗಿರುವ ನೀರನ್ನು ಉಪಯೋಗಿಸುವರು; ನೀರೆ ರೆಯುವಾಗ ಹೀಗೆ ಪುಡಿಯಿಂದ ತಿಕ್ಕಿ ನೋಯಿಸುವರು, ಇಲ್ಲವೆ ಕಣ್ಣಿಗೆ ಬೀಳುವ ಉರಿಯುವಂತೆ ಮಾಡುವರು. ಸ್ನಾನಕ್ಕೆ ಮಾಡಿಸ

ನಂತರ ಬಟ್ಟೆ ಹಾಕುವಾಗ ಕೈ ಮೈಗಳನ್ನು ಎಳೆದು ನೋವುಂಟು ಮಾಡುವರು. ಮೊದಲಿನಿಂದಲೂ ಜಾಗರೂಕತೆಯಿಂದ ಮಗುವಿಗೆ ಸ್ನಾನ ಮಾಡಿಸುತ್ತ ಬಂದರೆ ಸ್ನಾನವೆಂದರೆ ಬೇಜಾರುಪಡುವ ಮನೋವೃತ್ತಿ ಉಂಟಾಗುವುದಿಲ್ಲ. ಮತ್ತು ಮಾತು ತಿಳಿದುಕೊಳ್ಳುವ ಮಗುವಿಗೆ ಸ್ನಾನ ಮಾಡಿಸುವ ಸಮಯದಲ್ಲಿ ಸ್ನಾನವು ಮೈಯನ್ನು ಶುಚಿಯಾಗಿಡುವುದಕ್ಕೋಸ್ಕರ ಮಾಡುವ ಕ್ರಿಯೆಯೆಂದು ಮುಂದಟ್ಟು ಗುವಂತೆ ಹೇಳಿ ತಿಳಿಸಬೇಕು. ಒಂದು-ಒಂದೂವರೆ ವರ್ಷ ವಯ ಸ್ಸಾದನಂತರ ಮಗು ನೀರನ್ನು ತಾನೇ ಹಾಕಿಕೊಳ್ಳಲು ಆಸೆ ಪಡುವುದು. ಇದರಿಂದ ತಾಯಿಗೆ ಸ್ವಲ್ಪ ತೊಂದರೆಯಾಗಬಹುದು. ಆದರೆ ಇದು ಬೆಳೆಯುತ್ತಿರುವ ಮಗುವಿನ ಆವಶ್ಯಕ ಲಕ್ಷಣವೆಂದರಿತು ಸಹಕರಿಸಬೇಕು.

ಕೆಲವು ಮಕ್ಕಳು ಸ್ನಾನಕ್ಕೆ ಹೋಗಿ ನೀರಿನಲ್ಲಿ ಆಡಿಕೊಂಡು ಬಹಳ ಹೊತ್ತಾದ ಮೇಲೆ ಹೊರಗೆ ಬರುವರು. ನೀರನ್ನು ನೋಡಿ ದರೆ ಅಂಜಿಕೊಳ್ಳುವುದು ಹೇಗೆ ಮಗುವಿನಲ್ಲಿ ಒಂದು ಕೊರತೆಯೋ, ಹಾಗೆಯೇ ಹೆಚ್ಚು ಹೊತ್ತು ನೀರಿನಲ್ಲಿ ಆಡುವುದೂ ಒಂದು ಕೆಟ್ಟ ಅಭ್ಯಾಸ. ತಾಯಿಯು ಜಾಗರೂಕತೆಯಿಂದ ಈ ಅಭ್ಯಾಸವನ್ನು ಬಿಡಿಸಬೇಕು. ಮುಖ್ಯವಾಗಿ ಸ್ನಾನವು, ನಾವು ಶುಚಿಯಾಗಿರಲು ಮಾಡಬೇಕಾದ ಒಂದು ಕೆಲಸವೆಂಬ ಅಂಶವನ್ನು ಮಕ್ಕಳಲ್ಲಿ ಉಂಟು ಮಾಡಬೇಕು.

೫. **ಉಡುಪು**—ಮೂರು ನಾಲ್ಕು ತಿಂಗಳ ವಯಸ್ಸಿನಲ್ಲಿ ಯೇ ಬಟ್ಟೆಗಳನ್ನು ಹಾಕುವಾಗ ಸಹಕರಿಸುವಂತೆ ಮಗು ಕೈಕಾಲು ಗಳನ್ನು ಆಡಿಸುವುದು. ಒಂದು-ಒಂದೂವರೆ ವರ್ಷ ವಯಸ್ಸಿನ ಮಗು ತನ್ನ ಬಟ್ಟೆಗಳನ್ನು ತಾನೇ ಹಾಕಿಕೊಳ್ಳಬೇಕೆಂದು ಬಯಸ್ಸು ವುದು. ಈ ಬಯಕೆಯನ್ನು ತಾಯಿ ಪ್ರೋತ್ಸಾಹಿಸಿ ಮಗು

ತನ್ನ ಕೆಲಸಗಳಲ್ಲಿ ಸ್ವತಂತ್ರವಾಗಿರುವ ಹಾಗೆ ಮಾಡಬೇಕು. ಆದು ದರಿಂದ ಮಗುವಿನ ಉಡುಪುಗಳು ಸರಳವಾಗಿಯೂ, ಗುಂಡಿಗಳು ತೊಡಕಿಲ್ಲದೆ ಹಾಕಿಕೊಳ್ಳುವ ರೀತಿಯಲ್ಲಿಯೂ ಇರಬೇಕು. ಮಗು ವಿನ ಬಟ್ಟೆಗಳು ಅದಕ್ಕೆ ಹಿತವಾಗಿರಬೇಕೇ ಹೊರತು ಹಿಂಸಕರವಾ ಗಿರಬಾರದು. ಅತಿ ಬಿಗಿಯಾದ ಅಥವಾ ಅತಿ ಸಡಿಲವಾದ ಉಡುಪು ಗಳು ಮಗುವಿನ ಬೆಳವಣಿಗೆಗೆ ಕುಂದಕವನ್ನುಂಟುಮಾಡುವುವು. ದೇಹದ ಶಾಖವನ್ನು ಕಾಪಾಡುವುದು ಉಡುಪುಗಳ ಮುಖ್ಯ ಉದ್ದೇಶವಾದುದರಿಂದ ಅದಕ್ಕೆ ತಕ್ಕಂತೆ ಉಡುಪುಗಳನ್ನು ತಯಾರಿಸ ಬೇಕು. ಆವಶ್ಯಕತೆಗಿಂತ ಕಡಮೆ ಬಟ್ಟೆಯನ್ನು ಹಾಕುವುದರಿಂದ ಮಗುವಿನ ಶಕ್ತಿಯು ಕುಂದುವುದು ; ಹೆಚ್ಚು ಬಟ್ಟೆಗಳನ್ನು ಹಾಕುವು ದರಿಂದ ಮೈ ಬೆವರಿ ಮಗು ಶೀತ ನೆಗಡಿಗಳಿಗೆ ಒಳಗಾಗುವುದು.

ಮಗುವಿಗೆ ನಿರ್ಮಲವಾದ ಬಟ್ಟೆಗಳನ್ನು ಹಾಕಿದರೆ ತನ್ನ ಬಟ್ಟೆಯ ಸ್ವಚ್ಛತೆಯನ್ನು ಕಾಪಾಡಿಕೊಳ್ಳಲು ಪ್ರಯತ್ನಿಸಿ ಪರಿಶುದ್ಧ ತೆಯ ಪಾಠವನ್ನು ಕಲಿಯುವುದು. ಕೊಳಕು ಮತ್ತು ಹರಕಲು ಬಟ್ಟೆ ಗಳನ್ನು ಹಾಕಿದರೆ ಮಗುವಿನ ಆತ್ಮಗೌರವಕ್ಕೆ ಕುಂದಕ ಬಂದು, ಯಾವಾಗಲೂ ಬಟ್ಟೆಗಳಮೇಲೆಯೇ ಗಮನವಿಟ್ಟು, ಇತರ ಮಕ್ಕ ಳೊಡನೆ ಸಂಕೋಚದಿಂದಲೂ, ಅಂಜಿಕೆಯಿಂದಲೂ, ತಾನು ಕೀಳೆಂಬ ಮನೋಭಾವನೆಯಿಂದಲೂ ವರ್ತಿಸುವುದು.

# ಅಧ್ಯಾಯ ೬.

## ಭಾವೋದ್ರೇಕಗಳು

ನಾಲ್ಕೈದು ವರ್ಷದ ಮಕ್ಕಳನ್ನು ನೋಡಿದರೆ ಅವರು ಕೋಪ, ಭಯ, ಅಸೂಯೆ, ದ್ವೇಷ ಮುಂತಾದ ಭಾವೋದ್ರೇಕಗಳನ್ನು ಸ್ಪಷ್ಟವಾಗಿ ವ್ಯಕ್ತಪಡಿಸುವರೆಂದು ಕಂಡುಬರುವುದು. ಈ ಭಾವೋದ್ರೇಕಗಳ ಅನುಭವ ಮಗುವಿನಲ್ಲಿ ಹುಟ್ಟಿದಾಗಿನಿಂದಲೂ ಇರುವುದೇ? ಮೊದಮೊದಲು ಅದು ಯಾವರೀತಿಯಿಂದ ಕಾಣಿಸಿಕೊಳ್ಳುವುದು? ಈ ಪ್ರಶ್ನೆಗಳಿಗೆ ಉತ್ತರ ದೊರೆಯಬೇಕಾದರೆ ಹುಟ್ಟಿದ ಕ್ಷಣದಿಂದಲೂ ಮಗುವನ್ನು ಜಾಗರೂಕತೆಯಿಂದ ಪರೀಕ್ಷಿಸಬೇಕು.

ಹುಟ್ಟಿದ ಮೊದಲನೆಯ ಎರಡುಮೂರು ವಾರಗಳಲ್ಲಿ ತೃಪ್ತಿ ಅತೃಪ್ತಿಗಳ ಹೊರತು ಮತ್ತಾವ ಭಾವೋದ್ರೇಕಗಳೂ ಕಾಣಬರುವುದಿಲ್ಲ. ಮಗುವಿಗೆ ನೋವುಂಟಾದಾಗ, ಅಲ್ಲವೆ ಅಸ್ವಸ್ಥತೆಯುಂಟಾದಾಗ ಅತೃಪ್ತಿಯನ್ನು ಅಳುವುದರ ಮೂಲಕವೂ, ಕೈಕಾಲುಗಳನ್ನು ಬಡಿಯುವುದರ ಮೂಲಕವೂ, ನೋವು ನಿವಾರಣೆಯಾದಾಗ ಇಲ್ಲವೆ ಸ್ವಸ್ಥತೆಯಿಂದಿರುವಾಗ ತೃಪ್ತಿಯನ್ನು ಕೈಕಾಲುಗಳನ್ನಾಡಿಸುತ್ತಾ ಸುಮ್ಮನಿರುವುದರ ಮೂಲಕವೂ ಹೊರಪಡಿಸುವುದು. ಈ ವಯಸ್ಸಿನಲ್ಲಿ ಮಗುವಿನ ಭಾವಪ್ರಪಂಚದಲ್ಲಿ ತೃಪ್ತಿ-ಅತೃಪ್ತಿಗಳೆರಡೇ ಸತತವಾಗಿ ಇರುವುವು. ತೃಪ್ತಿಯನ್ನು ಸೂಚಿಸುವ ಕೈಕಾಲುಗಳ ಆಟವೂ ಶಾಂತತೆಯೂ ಅಸ್ವಸ್ಥತೆಯುಂಟಾಗುವ ವರೆಗೂ ಮುಂದುವರಿಯುವುದು. ಹೀಗೆಯೇ ಅಸ್ವಸ್ಥತೆಯನ್ನು ಸೂಚಿಸುವ ಅಳು ಮತ್ತು ಕೈಕಾಲುಗಳಬಡಿದಾಟವು ಅಸ್ವಸ್ಥತೆಯು ನಿವಾರಣೆಯಾಗುವ ವರೆಗೂ ಇರುವುದು. ಹೊಟ್ಟೆನೋವು, ಹಾಸಿಗೆಯು ಒದ್ದೆಯಾಗಿರುವುದು,

ಹಾಸಿಗೆಯು ಮುದರಿಕೊಂಡು ಮೈಯನ್ನು ಚುಚ್ಚಿ ನೋಯಿಸುವುದು ಇವೇ ಮುಂತಾದುವು ಸಂಭವಿಸಿದರೆ ಮಗು ಅತೃಪ್ತಿಯನ್ನು ತೋರಿಸುವುದು. ಇವುಗಳ ನಿವಾರಣೆಯು ಅತೃಪ್ತಿಯನ್ನು ಹೋಗಲಾಡಿಸುವುದು. ಮಗುವಿನ ಬೆಳವಣಿಗೆಯಲ್ಲಿ ಸೂಚಿತವಾಗುವ ಒಂದು ಮುಖ್ಯ ಅಂತಸ್ತಾವುದೆಂದರೆ-ಮಗು ತನ್ನ ಅಸ್ವಸ್ಥತೆಯು ನಿವಾರಣೆಯಾದಾಗ ತೃಪ್ತಿ ಪಡುವುದೊಂದೇ ಅಲ್ಲದೆ ಕ್ರಮೇಣ, ಅಸ್ವಸ್ಥತೆಯನ್ನು ನಿವಾರಣೆ ಮಾಡಿದವರನ್ನು ನೋಡಿದಾಗಲೂ ತೃಪ್ತಿಯನ್ನು ಹೊಂದುವುದು. ಇದೇ ಮಗುವಿಗೆ ತಾಯಿಯಲ್ಲಿರುವ ಪ್ರೇಮಕ್ಕೆ ತಳಹದಿ. ಪ್ರಾರಂಭವಲ್ಲಿ ಅಸ್ವಸ್ಥತೆಯ ನಿವಾರಣೆಯು ತೃಪ್ತಿಗೆ ಕಾರಣವಾದರೂ ಕಾಲಕ್ರಮದಲ್ಲಿ ಈ ಅಸ್ವಸ್ಥತೆಯನ್ನು ನಿವಾರಣೆ ಮಾಡುವ ಸನ್ನಿವೇಶಗಳೂ ವ್ಯಕ್ತಿಗಳೂ ತೃಪ್ತಿಗೆ ಕಾರಣರಾಗುವರು.

ಷರ್ಮನ್ ಎಂಬ ಶಾಸ್ತ್ರಜ್ಞನು ಒಂದು ತಿಂಗಳೊಳಗಿನ ಮಕ್ಕಳ ಮೇಲೆ ಬೇರೆಬೇರೆ ಭಾವಗಳನ್ನು ಹುಟ್ಟಿಸುವಂತಹ ಪ್ರಚೋದನೆಗಳನ್ನು ಪ್ರಯೋಗ ಮಾಡಿದನು. ಆಗ ಮಕ್ಕಳು ತೋರ್ಪಡಿಸಿದ ಅನುಭವಗಳ ಚಲನಚಿತ್ರವನ್ನು ತೆಗೆದು ಅವನ್ನು ಮಕ್ಕಳ ವರ್ತನೆಯ ಪರಿಶೀಲನದಲ್ಲಿ ಪ್ರವೀಣರಾದ ಕೆಲವು ಮನಶ್ಶಾಸ್ತ್ರಜ್ಞರಿಗೂ ವೈದ್ಯರಿಗೂ ದಾದಿಯರಿಗೂ ತೋರಿಸಿ ಯಾವ ಯಾವ ಚಲನವಲನಗಳು ಯಾವ ಯಾವ ಭಾವಗಳನ್ನು ಹೊರಪಡಿಸುವುದೆಂದು ಕೇಳಲು, ಒಬ್ಬೊಬ್ಬರು ಒಂದೊಂದು ವಿಧವಾದ ಉತ್ತರವನ್ನಿತ್ತರು. ಯಾವ ಚರ್ಯೆಯು ಯಾವ ಭಾವವನ್ನು ಸೂಚಿಸುವುದೆಂಬುದನ್ನು ಹೇಳಲು ಸಾಧ್ಯವಿಲ್ಲವೆಂದು ಪ್ರಯೋಗದಿಂದ ಸ್ಥಿರಪಟ್ಟಿತು. ಆದರೆ ಮಗುವಿಗೆ ನಾಲ್ಕಾರು ತಿಂಗಳು ತುಂಬಿದ ಮೇಲೆ ಅವರ ಧ್ವನಿ ಮತ್ತು ವರ್ತನದಿಂದ ಆದರಲ್ಲಿ ಉದ್ರೇಕವಾದ ಭಾವವನ್ನು ಕಂಡುಹಿಡಿಯಲು ಸಾಧ್ಯವಾಗಿದೆ. ಮಗುವಿನ ಮುಖಚರ್ಯೆಯಿಂದಲೂ, ದೇಹದ

ಇತರ ಭಾಗಗಳ ಚಲನವಲನಗಳಿಂದಲೂ ಮಗುವು ಯಾವ ಭಾವವನ್ನು ತೋರ್ಪಡಿಸುವುದೆಂಬುದನ್ನು ಹೇಳಬಹುದು.

## ಹೆದರಿಕೆ

ಒಂದು ತಿಂಗಳ ಮಗುವಿನಲ್ಲಿ ಯಾವಾಗಲೋ ಒಂದು ಸಲ ಭಯದ ಚಿಹ್ನೆಗಳು ಕಾಣಿಸಿಕೊಳ್ಳುವುವು. ಎರಡನೆಯ ಮೂರನೆಯ ತಿಂಗಳಲ್ಲಿ ದೊಡ್ಡ ಶಬ್ದವಾದಾಗ, ಪವನ ತಪ್ಪಿದಾಗ ಅಥವಾ ನೋವುಂಟಾದಾಗ ಭಯದ ಸೂಚನೆಯನ್ನು ತೋರಿಸುವುವು. ಮೊದಲನೆಯ ವರ್ಷದಲ್ಲಿ ಹೆದರಿಕೆಯು ಹುಟ್ಟಲು ಈ ಮೂರರಲ್ಲೊಂದು ಕಾರಣವಿರಬೇಕೇ ಹೊರತು ಬೇರೆ ಯಾವ ಕಾರಣದಿಂದಲೂ ಹೆದರಿಕೆಯುಂಟಾಗುವುದಿಲ್ಲವೆಂದು ಧಾರಾಳವಾಗಿ ಹೇಳಬಹುದು. ಹಾಗಾದರೆ ಬೆಳೆಯುತ್ತ ಬೆಳೆಯುತ್ತ ಮಕ್ಕಳಲ್ಲಿ ನಾನಾ ಕಾರಣಗಳಿಂದ ಹೆದರಿಕೆಯುಂಟಾಗಲು ಕಾರಣವೇನು ?

ಹೆದರಿಕೆಗಳೆಲ್ಲವೂ ಸ್ವಾಭಾವಿಕವಾದುವಲ್ಲ ; ಸಂಸರ್ಗಜನ್ಯವಾದ ಹೆದರಿಕೆಗಳೇ ಹೆಚ್ಚು. ಸಿಡಿಲಿನ ಶಬ್ದವನ್ನು ಕೇಳಿ ಬೆಚ್ಚಿ ಬೀಳುವುದೂ, ಬೆಂಕಿ ತಾಕಿದಾಗ ಹೆದರಿ ಬೆರಳನ್ನು ಹಿಂದಕ್ಕೆಳೆದುಕೊಳ್ಳುವುದೂ ಸ್ವಾಭಾವಿಕ ಹೆದರಿಕೆಗೆ ಉದಾಹರಣೆಗಳು, ಆದರೆ ಇವುಗಳ ಸಂಸರ್ಗದಲ್ಲಿರುವ ಅಪ್ರಕೃತವಾದ ಇತರ ಪ್ರಚೋದನೆಗಳಿಂದಲೂ ಹೆದರಿಕೆ ಹುಟ್ಟಬಹುದು. ಬೆಕ್ಕಿನೊಡನೆ ಆಡುತ್ತಿದ್ದ ಮಗು ಅದರಿಂದ ಪರಚಿಸಿಕೊಂಡ ಮೇಲೆ ಬೆಕ್ಕನ್ನು ಮಾತ್ರವೇ ಅಲ್ಲ ಬೆಕ್ಕಿನಂತಿರುವ ಬೊಂಬೆಯನ್ನು ನೋಡಿದರೂ ಸಹ ಹೆದರುವುದು. ಹಾಗೆಯೇ ನಾಯಿಯೊಡನೆ ಆಡುತ್ತಿರುವಾಗ ಅದು ಕರ್ಕಶವಾಗಿ ಬಗುಳಿ ಶಬ್ದಮಾಡಿದರೆ ಅಂದಿನಿಂದ ಮಗು ನಾಯಿಯ ಹತ್ತಿರ ಹೋಗಲು ಹೆದರುವುದು. ಪರಚುವಿಕೆಯಿಂದುಂಟಾದ ನೋವು, ಬಗುಳುವಿಕೆಯಿಂದುಂಟಾದ ಕಠೋರ ಶಬ್ದಗಳು ಹೆದರಿ

ಕೆಗೆ ಕಾರಣ. ಆದರೆ ಪರಚಿದ ಬೆಕ್ಕನ್ನೂ, ಬಗುಳಿದ ನಾಯಿಯನ್ನೂ ಅಷ್ಟೇ ಅಲ್ಲ ಬೆಕ್ಕು ನಾಯಿಗಳನ್ನು ಹೋಲುವ ವಸ್ತುಗಳನ್ನೂ ಕಂಡರೆ ಹೆದರುವುದು. ಇದು ಸಂಸರ್ಗಜನ್ಯವಾದ ಹೆದರಿಕೆ. ವಾಟ್ಸನ್ ಎಂಬಾತ ನಡಸಿದ ಪ್ರಯೋಗ ಇದನ್ನು ಸ್ಪಷ್ಟಪಡಿಸುವುದು. ಆತ ಹದಿನೈದು ತಿಂಗಳಿನ ಮಗುವಿನ ಹತ್ತಿರ ಒಂದು ಮೊಲವನ್ನಿಟ್ಟನು. ಅದರೊಡನೆ ಮಗು ಹರ್ಷದಿಂದ ಆಡಲಾರಂಭಿಸಿತು. ಈ ಮಗುವಿಗೆ ನಾಯಿಯನ್ನಾಗಲೀ ಬೆಕ್ಕನ್ನಾಗಲೀ ಕಂಡರೆ ಹೆದರಿಕೆ ಇರಲಿಲ್ಲ. ಅದು ಮೊಲದ ಜೊತೆಯಲ್ಲಿ ಆಡಿಕೊಂಡಿದ್ದಾಗ ಒಂದು ತಗಡಿನ ಡಬ್ಬವನ್ನು ಬಡಿದು ಅಗಾಧವಾದ ಶಬ್ದವನ್ನುಂಟುಮಾಡಿದನು. ಈ ಶಬ್ದವನ್ನು ಕೇಳಿ ಮಗು ಹೆದರಿ ಮೊಲವನ್ನು ಬಿಟ್ಟು ತಾಯಿಯ ಹತ್ತಿರ ಓಡಿಹೋಯಿತು. ಮತ್ತೊಮ್ಮೆ ಮಗು ಮೊಲದೊಡನೆ ಆಡುತ್ತಿರುವಾಗಲೂ ಅದೇ ರೀತಿ ಬೊಬ್ಬೆ ಎಬ್ಬಿಸಿದನು. ಅನಂತರ ಮೊಲವನ್ನು ನೋಡಿದರೆ ಆ ಮಗುವಿಗೆ ಹೆದರಿಕೆಯುಂಟಾಯಿತು. ಮೊಲವನ್ನೊಂದನ್ನೇ ಅಲ್ಲದೆ ಮೊಲದಂತೆ ಕೂದಲುಳ್ಳ ಪ್ರಾಣಿಗಳನ್ನೂ ಬೊಂಬೆಗಳನ್ನೂ ನೋಡಿ ಹೆದರಲಾರಂಭಿಸಿತು. ಈ ವಿಧವಾಗಿ ಸಂಸರ್ಗಜನ್ಯವಾದ ಹೆದರಿಕೆಗಳು ಹರಡುವುವು. ಕತ್ತಲೆಯಲ್ಲಿ ಹೋಗಿ ಗೋಡೆಗೆ ತಲೆಯನ್ನು ತಾಕಿಸಿಕೊಂಡು ನೋವುಂಟುಮಾಡಿಕೊಂಡ ಮಗು ಕತ್ತಲೆಯನ್ನು ನೋಡಿ ಹೆದರುವುದು. ಹೀಗೆ ಆರೋಪಿತವಾದ ಹೆದರಿಕೆಗಳಿಗೆ ಇಂಗ್ಲೀಷಿನಲ್ಲಿ " ಕಂಡಿಷನ್ಡ್ ಫ್ರಿಯರ್ಸ್ " ಎಂದು ಹೆಸರು.

ಐದು ವರ್ಷ ವಯಸ್ಸಿನೊಳಗಿರುವ ಮಕ್ಕಳು ಬೀಳುವುದು, ದೊಡ್ಡ ಶಬ್ದಗಳು, ಮೃಗಗಳು, ಹಾನಿಯನ್ನುಂಟುಮಾಡುವ ಜನರು ಮತ್ತು ಸಾಮಾನುಗಳು, ಹೊಸಬರು ಮತ್ತು ಹೊಸ ಸ್ಥಳಗಳು ಇತ್ಯಾದಿಗಳಿಗೆ ಹೆದರುವರು. ಈ ಸಂದರ್ಭಗಳೆಲ್ಲವೂ ಮಕ್ಕಳ

ವಾತಾವರಣದಲ್ಲಿಯೇ ಒದಗುವುವು. ಆದರೆ ಐದು ವರ್ಷ ಕಳೆದ ಮಕ್ಕಳಲ್ಲಿ ದೆವ್ವ ಪಿಶಾಚಿ ಶವ ಇವೇ ಮುಂತಾದುವು ಹೆದರಿಕೆಗೆ ಕಾರಣವಾಗುವುವು. ದೇಹ ಹಾನಿಯೇ ಎಳೆ ಮಗುವಿನ ಹೆದರಿಕೆಗೆ ಕಾರಣವಾಗಿದ್ದರೂ ಮಗು ಬೆಳೆಯುತ್ತ ಬೆಳೆಯುತ್ತ ಇದರ ಪ್ರಾಬಲ್ಯವು ಕಡಮೆಯಾಗಿ ಐದು ವರ್ಷ ವಯಸ್ಸು ಕಳೆದ ಮೇಲೆ ಭೌತ ವಸ್ತುಗಳಿಗಿಂತಲೂ ಕಾಲ್ಪನಿಕ ವಸ್ತುಗಳೇ ಮಕ್ಕಳ ಹೆದರಿಕೆಗೆ ಕಾರಣವಾಗುವುವು. ಹುಲಿ ಆನೆ ಸಿಂಹಾದಿಗಳಿಗೆ ಹೆದರದವರು ದೆವ್ವ ಪಿಶಾಚಿಗಳಿಗೆ ನಡುಗುವರು.

ಕೆಲವು ಮಕ್ಕಳು ಸಾಧಾರಣ ಸನ್ನಿವೇಶಗಳಲ್ಲಿಯೂ ವಿಪರೀತವಾದ ಹೆದರಿಕೆಯನ್ನು ತೋರ್ಪಡಿಸಬಹುದು. ಹರಿಯುತ್ತಿರುವ ನೀರನ್ನು ನೋಡಿ, ಸುರಿಯುತ್ತಿರುವ ಮಳೆಯನ್ನು ಕಂಡು, ಚಟಾಕಿ ಪಟಾಸುಗಳ ಸದ್ದನ್ನು ಕೇಳಿ ಅಥವಾ ಉರಿಯುತ್ತಿರುವ ಬೆಂಕಿಯನ್ನು ನೋಡಿ ಹೆದರುವರು. ಮತ್ತೆ ಕೆಲವು ಮಕ್ಕಳು ಮಾಯ ಮಂತ್ರ ದೊಂಬರಾಟ ಮುಂತಾದುವುಗಳನ್ನು ನೋಡಿದರೆ ಅಂಜಿಕೊಳ್ಳುವರು. ಇತರ ಮಕ್ಕಳು ಕುತೂಹಲದಿಂದ ನೋಡುತ್ತಿದ್ದರೆ ಈ ಮಕ್ಕಳು ಭಯವನ್ನು ತೋರ್ಪಡಿಸುವರು.

ಕೆಲವು ವೇಳೆ ಮಕ್ಕಳು ಕೆಟ್ಟ ಕನಸುಗಳನ್ನು ಕಂಡು ಮಧ್ಯರಾತ್ರಿಯಲ್ಲಿ ಎಚ್ಚೆತ್ತು ಅಳಲಾರಂಭಿಸುವರು. ಕನಸಿನಲ್ಲಿ ದುಷ್ಟ ಮೃಗಗಳನ್ನೊ ದೆವ್ವಗಳನ್ನೊ ಕಂಡು ಹೆದರಿ ಎಚ್ಚರಗೊಳ್ಳಬಹುದು ಎರಡು ಮತ್ತು ಮೂರನೇ ವರ್ಷ ವಯಸ್ಸಿನಲ್ಲಿ ಈ ತರಹದ ಕನಸುಗಳುಂಟಾಗುವುವು. ತಂದೆತಾಯಿಗಳಿಗೆ ಬಹುವಾಗಿ ಹೆದರುವ ಮಕ್ಕಳು ಈ ರೀತಿಯ ಕನಸನ್ನು ಕಾಣುವರು. (ಕನಸಿನಲ್ಲಿ ತಂದೆತಾಯಿಗಳು ದುಷ್ಟಮೃಗಗಳ ಮತ್ತು ದೆವ್ವಗಳ ರೂಪವನ್ನು ತಾಳುವರು !) ಇಂತಹ ಹೆದರಿಕೆಗಳು ಮಗುವಿನ ಮನಸ್ಸಿನಲ್ಲಿ ಒಳತೋಟ

ಯನ್ನುಂಟುಮಾಡಿ ಕನಸುಗಳಿಗೆ ಮಾತ್ರವೇ ಅಲ್ಲದೆ ಇತರ ವರ್ತನೆಗಳಿಗೂ ಕಾರಣವಾಗುವುವು. ಮಗು ಹಾಸಿಗೆಯಲ್ಲಿ ಉಚ್ಚೆ ಹೊಯ್ದುಕೊಳ್ಳುವುದು ಅಥವಾ ಕೆಲವು ಊಟದ ಪದಾರ್ಥಗಳನ್ನು ಕಂಡರೆ ಅನಿಚ್ಛೆಯನ್ನು ತೋರಿಸುವುದು. ಈ ವಿಧವಾಗಿ ಮಗುವಿನ ಹೆದರಿಕೆಯು ನಾನಾ ರೂಪಗಳನ್ನು ತಾಳುವುದು.

ಇಂತಹ ಹೆದರಿಕೆಗಳನ್ನು ಹೋಗಲಾಡಿಸಬೇಕಾದರೆ ಎರಡು ಅಂಶಗಳನ್ನು ತಂದೆತಾಯಿಗಳು ಗಮನದಲ್ಲಿಟ್ಟಿರಬೇಕು. ಮೊದಲನೆಯದಾಗಿ ಈ ಹೆದರಿಕೆಗಳ ಮೇಲೆ ಮಗುವಿಗೆ ಹತೋಟಿಯಿಲ್ಲವೆಂಬ ವಿಷಯವನ್ನು ಅರಿಯಬೇಕು. ಈ ಹೆದರಿಕೆಗಳು ನಮಗೆ ಅವಿವೇಕವಾದುವೆಂದು ತೋರಿಬಂದರೂ, ತಕ್ಕ ಕಾರಣದಿಂದ ಹುಟ್ಟಿದುದಲ್ಲವೆಂದು ಗೊತ್ತಿದ್ದರೂ ಮಗುವಿಗೆ ಮಾತ್ರ ಅವು ಸತ್ಯವಾದ ಅನುಭವಗಳೆಂಬುದನ್ನು ತಿಳಿಯಬೇಕು. ಆಡ್ಲರ್ ಎಂಬ ಮನಶ್ಶಾಸ್ತ್ರಜ್ಞನು ಹೇಳಿರುವಂತೆ, ಕಳ್ಳನನ್ನು ಕಂಡುದರಿಂದ ಹುಟ್ಟುವ ಹೆದರಿಕೆಗೂ, ಕಳ್ಳನು ಬರಬಹುದೆಂಬ ಊಹೆಯಿಂದ ಹುಟ್ಟುವ ಹೆದರಿಕೆಗೂ ಯಾವ ವ್ಯತ್ಯಾಸವೂ ಇಲ್ಲ. ಕಾರಣ ಅಸತ್ಯವಾದುದು; ಆದರೂ ಅನುಭವ ಮಾತ್ರ ಸತ್ಯವಾದುದೇ. ಎರಡನೆಯದಾಗಿ ಮಕ್ಕಳ ಈ ಹೆದರಿಕೆಗಳು ಸ್ವಲ್ಪಕಾಲವಿದ್ದು ಅನಂತರ ತಮ್ಮಷ್ಟಕ್ಕೆ ತಾವೇ ಅಳಿಸಿಹೋಗಿಬಿಡುವುವೆಂದು ತಿಳಿಯಬೇಕು.

ಈ ಹೆದರಿಕೆಗಳನ್ನು ಹೋಗಲಾಡಿಸಲು, ತಂದೆತಾಯಿಗಳು ಹೆದರಿಕೆಯನ್ನುಂಟುಮಾಡುವ ಸನ್ನಿವೇಶಗಳು ಒದಗದಿರುವಹಾಗೆ ನೋಡಿಕೊಳ್ಳಬೇಕು. ಸನ್ನಿವೇಶವುಂಟಾಗದಿದ್ದರೆ ಹೆದರಿಕೆಯೂ ಉಂಟಾಗುವುದಿಲ್ಲ. ಆಗ ಹೆದರಿಕೆಗೂ ಸನ್ನಿವೇಶಕ್ಕೂ ಇರುವ ಸಂಬಂಧ ಕ್ಷೀಣಿಸಿಹೋಗುವುದು.

ಸನ್ನಿವೇಶವು ಒದಗಿ ಹೆದರಿಕೆಯುಂಟಾದರೆ ತಂದೆತಾಯಿಗಳು ಮಗುವಿಗೆ ಧೈರ್ಯವನ್ನು ಹೇಳಬೇಕು. ಅವರಿಗೆ ಸೌಖ್ಯವನ್ನುಂಟು ಮಾಡಿ ಹೆದರಿಕೆಯ ಕಡೆಯಿಂದ ಮಗುವಿನ ಗಮನವನ್ನು ಬೇರೆ ಕಡೆಗೆ ಸೆಳೆಯಬೇಕು. ಆದರೆ ಈ ವಿಧಾನದಲ್ಲಿ ಒಂದು ಕೊರತೆ ಯಿರುವುದು ; ಹೆದರಿಕೆಗೆ ಹೆಚ್ಚು ಗಮನವನ್ನು ಕೊಟ್ಟರೆ ಮಗು ಈ ಹೆದರಿಕೆಯನ್ನು ಒಂದು ಸಾಧನವನ್ನಾಗಿ ಉಪಯೋಗಿಸಿಕೊಂಡು ತಾಯಿತಂದೆಗಳಿಂದ ತನಗೆ ಬೇಕಾದುದನ್ನೆಲ್ಲಾ ಪಡೆಯಲು ಯತ್ನಿಸುವುದು.

ಅಂಜಿರುವ ಮಗುವನ್ನು ಬಯ್ಯಬಾರದು, ಹೀಯಾಳಿಸಲೂ ಬಾರದು. ಹೀಗೆ ಮಾಡಿದರೆ ಮಗುವಿಗೆ ತನ್ನ ವಿಷಯದಲ್ಲಿ ಕೀಳು ಭಾವನೆಯುಂಟಾಗಿ ಇತರ ವಿಪರೀತ ವರ್ತನೆಗಳಿಗೆ ಕಾರಣವಾಗ ಬಹುದು.

ಹೆದರಿಕೆಯನ್ನು ಹೋಗಲಾಡಿಸಲು ವಾಟ್ಸನ್ ಮತ್ತೊಂದು ವಿಧಾನವನ್ನು ಪ್ರಯೋಗಮಾರ್ಗದಿಂದ ತೋರಿಸಿಕೊಟ್ಟಿರುವನು. ಮೊಲವನ್ನು ಕಂಡು ಹೆದರುತ್ತಿದ್ದ ಮಗು ಊಟಮಾಡುತ್ತಿದ್ದ ಸಮಯದಲ್ಲಿ, ಅಂದರೆ ಅದರ ಮನಸ್ಸು ತೃಪ್ತಿಯಿಂದ ಕೂಡಿರುವ ಸಮಯದಲ್ಲಿ ಮೊಲವನ್ನು ಸ್ವಲ್ಪ ದೂರದಲ್ಲಿ ತಂದಿಟ್ಟನು. ಅದನ್ನು ನೋಡಿದರೂ ಮಗು ತನ್ನ ಊಟವನ್ನು ಮುಂದುವರಿಸಿತು. ಮಾರನೆಯ ದಿನ ಮಗು ಊಟಮಾಡುತ್ತಿರುವಾಗ ಮೊಲವನ್ನು ಇನ್ನೂ ಸ್ವಲ್ಪ ಹತ್ತಿರ ತಂದಿಡಲಾಯಿತು. ಹೀಗೆ ಕ್ರಮೇಣ ಮೂರು ನಾಲ್ಕು ದಿನಗಳಲ್ಲಿ ಮಗು ಹೆದರಿಕೆಯನ್ನು ಬಿಟ್ಟು ಮೊಲದೊಡನೆ ಮತ್ತೆ ಮೊದಲಿನಂತೆ ಆಡಲಾರಂಭಿಸಿತು. ಹೀಗೆ ಭಯೋತ್ಪಾದಕ ವಸ್ತುವನ್ನು ಸಂತೋಷಕರವಾದ ಸನ್ನಿವೇಶದಲ್ಲಿ ಕ್ರಮ ಕ್ರಮವಾಗಿ ತಂದಿಡುವುದರಿಂದ ಅದರ ವಿಷಯದಲ್ಲಿದ್ದ ಹೆದರಿಕೆಯನ್ನು ಬಿಡಿಸಬಹುದು.

ತಂದೆತಾಯಿಗಳ ಕ್ರೂರ ವರ್ತನೆಯಿಂದ ಉಂಟಾದ ಹೆದರಿಕೆಯು ಮೇಲೆ ಹೇಳಿದಂತೆ ನಾನಾ ರೂಪಗಳನ್ನು ತಾಳುವುದು ; ಕೆಲವು ವೇಳೆ ತಂದೆಗಳು ಮಕ್ಕಳ ವಿಷಯದಲ್ಲಿ ಸಾತ್ವಿಕವಾಗಿ ವರ್ತಿಸಿದರೂ ಮಕ್ಕಳಿಗೆ ಅವರಲ್ಲಿ ಹೆದರಿಕೆ ಇದ್ದೇ ಇರುವುದು. ಈ ಹೆದರಿಕೆಯು ಸಕಾರಣವಾಗಿರದೆ ಇದ್ದರೂ ಮಗುವನ್ನು ಹೆಚ್ಚಾಗಿ ಪೀಡಿಸಬಹುದು. ಉದಾಹರಣೆ—ಮಕ್ಕಳ ಸುಳ್ಳುಗಳು. ಅನೇಕ ವೇಳೆ ಮಕ್ಕಳು ಸುಳ್ಳು ಮಾತುಗಳನ್ನು ಹೇಳುವುದುಂಟು. ಈ ಸುಳ್ಳುಗಳು ನಾನಾ ಕಾರಣಗಳಿಂದುಂಟಾಗಬಹುದು. ತನ್ನ ಊಹೆಗೂ ಅನುಭವಕ್ಕೂ ವ್ಯತ್ಯಾಸವನ್ನು ಕಾಣಲಾರದ ಮಗು ಊಹೆಯ ಆಧಾರದ ಮೇಲೆ ಸುಳ್ಳು ಹೇಳಬಹುದು. ಒಂದೇ ಕಡೆ ಕುಳಿತಿದ್ದ ಮಗು "ಅಂಗಡಿಗೆ ಹೋಗಿ ಸಾಮಾನನ್ನು ಕೊಂಡು ತಂದಿರುವೆ" ಎಂದು ಹೇಳಬಹುದು. ಆಟವಾಡುತ್ತಿರುವಾಗ ಒಂಟಿಯಾಗಿದ್ದರೂ ಇನ್ನೊಂದು ಮಗುವಿನ ಹೆಸರನ್ನು ಹೇಳಿ ಅದರೊಡನೆ ಸಂಭಾಷಣೆಯನ್ನು ನಡಸಬಹುದು. ಅಥವಾ ನಟನೆಗಾಗಿ ನಡೆಯದಿರುವ ಸಮಾಚಾರಗಳನ್ನು ಕುರಿತು ಪ್ರಸ್ತಾಪಿಸಬಹುದು. ಇಂತಹ ಸುಳ್ಳುಗಳಿಗೆ ಹೆಚ್ಚು ಗಮನ ಕೊಡಬೇಕಾದುದಿಲ್ಲ. ಬೆಳೆಯುತ್ತ ಬೆಳೆಯುತ್ತ ಈ ಸುಳ್ಳುಗಳು ತಮ್ಮ ಪಾಡಿಗೆ ತಾವೇ ನಿಂತುಹೋಗುವುವು.

ಕೆಲವು ವೇಳೆ ಹೆದರಿಕೆಯಿಂದ ಸುಳ್ಳು ಹುಟ್ಟುವುದು. ಮಗು ಆಟಗೆಯನ್ನೋ ಅಥವಾ ಬೇರೆ ಯಾವುದೋ ವಸ್ತುವನ್ನೋ ಮುರಿದು ಹಾಕುವುದು, ಇಲ್ಲವೇ ಕಳೆದುಬಿಡುವುದು. ಅದನ್ನು ಕುರಿತು ಕೇಳಿದಾಗ ತನಗೆ ಅದರ ವಿಷಯವೇ ಗೊತ್ತಿಲ್ಲವೆಂದು ಸುಳ್ಳು ಹೇಳಿ ಸಾಧಿಸಬಹುದು. ಮಗುವಿಗೆ ತಂದೆ ತಾಯಿಗಳಲ್ಲಿರುವ ಹೆದರಿಕೆಯೇ ಇಂತಹ ಸುಳ್ಳಿಗೆ ಕಾರಣ. ನಿಜವನ್ನು ಹೇಳಿದರೆ ಹೊಡೆಯುವರೆಂಬ ಭೀತಿಯಿಂದ ಮಗು ಸುಳ್ಳು ಹೇಳಲಾರಂಭಿಸುವುದು.

ಇಂತಹ ಸಮಯದಲ್ಲಿ ಆ ಮಗುವನ್ನು "ಸುಳ್ಳು ಹೇಳಿದೆಯಾ?" ಎಂದು ಬೈದು ಹೊಡೆದರೆ ಸುಳ್ಳು ಹೇಳುವ ಜಾಡ್ಯವು ಬಲವಾಗಿ ಬೇರೂರುವುದೇ ಹೊರತು ಕಡಮೆಯಾಗುವುದಿಲ್ಲ. ಹೀಗೆ ನಾವು ಬಯಸದಿರುವ ಫಲವೇ ದೊರೆಯುವಹಾಗೆ ಮಾಡಿಕೊಳ್ಳುವೆವು. ಆ ಸಮಯದಲ್ಲಿ ಸುಳ್ಳನ್ನು ಅಲಕ್ಷಿಸಿ ಯಾವ ಕಾರಣದಿಂದ ಮಗು ಸುಳ್ಳು ಹೇಳಿರುವುದೆಂದು ಯೋಚಿಸಬೇಕಾದುದು ತಂದೆ ತಾಯಿಗಳ ಕರ್ತವ್ಯ. ತಮ್ಮನ್ನು ಕಂಡು ಹೆದರಿ ಸುಳ್ಳು ಹೇಳಿದ್ದರೆ ಆ ಹೆದರಿಕೆಗೆ ಕಾರಣವಿಲ್ಲವೆಂದು ಮಗುವಿಗೆ ಮನದಟ್ಟಾಗುವಂತೆ ತಿಳಿಯ ಹೇಳಬೇಕು. ಮಗುವಿಗೆ ತಮ್ಮಲ್ಲಿರುವ ಹೆದರಿಕೆಯು ದೂರವಾಗಿ ತಮ್ಮಲ್ಲಿ ಭರವಸೆಯುಂಟಾಗುವ ಹಾಗೆ ವರ್ತಿಸಬೇಕು. ತಪ್ಪು ಮಾಡಿದರೆ ಕ್ಷಮಿಸುವರೆಂಬ ನಂಬಿಕೆಯು ಮಗುವಿನಲ್ಲಿದ್ದರೆ ಸುಳ್ಳು ಹೇಳಬೇಕಾದ ಅಗತ್ಯವೇ ಇರುವುದಿಲ್ಲ. 'ಅಟ್ಟದಿಂದ ಬಿದ್ದವನನ್ನು ದೊಣ್ಣೆಯಿಂದ ಬಡಿದರು,' ಎಂಬಂತೆ ತಪ್ಪುಮಾಡಿದ ಮಗುವನ್ನು ಬೈದು, ಹೊಡೆದು ಗಾಸಿಮಾಡುವುದನ್ನು ಬಿಟ್ಟು ಇನ್ನು ಮೇಲೆ ಇಂತಹ ತಪ್ಪನ್ನು ಮಾಡುವುದಿಲ್ಲವೆಂಬ ತೀರ್ಮಾನವನ್ನು ಮಗುವಿನ ಕೈಯಲ್ಲಿ ಮಾಡಿಸಬೇಕು.

ಇನ್ನೂ ಕೆಲವು ವೇಳೆ ಮಗು ತಾನು ಪ್ರಸಿದ್ಧತೆಯನ್ನು ಪಡೆಯಲು ಸುಳ್ಳು ಹೇಳಬಹುದು. ಇತರರು ತನ್ನನ್ನು ಗೌರವಿಸಲಿ ಎಂಬ ಉದ್ದೇಶದಿಂದ ಜಂಭ ಕೊಚ್ಚಿಕೊಳ್ಳಬಹುದು. ಇಂತಹ ಸುಳ್ಳು ಹೇಳುವ ಮಗುವನ್ನು ಬೇರೆ ರೀತಿಯಿಂದ ಕಾಣಬೇಕು. ಈ ಸುಳ್ಳಿಗೆ ಕಾರಣ–ಮಗುವಿಗೆ ತನ್ನಲ್ಲಿರುವ ಕೀಳುಭಾವನೆ. ಈ ಕೀಳು ಭಾವನೆಯನ್ನು ಹೋಗಲಾಡಿಸಲು ಪ್ರಯತ್ನಿಸಬೇಕು. ಮಗು ಚೆನ್ನಾಗಿ ಮಾಡುವ ಕೆಲಸಗಳನ್ನು ಹೊಗಳಿ ಪ್ರೋತ್ಸಾಹಿಸಬೇಕು. ಆತ್ಮಭರವಸೆಯು ಹುಟ್ಟುವ ಹಾಗೆ ಸನ್ನಿವೇಶಗಳನ್ನು ಒದಗಿಸಬೇಕು.

ಮುಖ್ಯವಾಗಿ ಮಕ್ಕಳಲ್ಲಿ ವಿಪರೀತ ಹೆದರಿಕೆಗಳ ಸೂಚನೆಯು ಕಂಡುಬಂದರೆ ತಂದೆತಾಯಿಗಳು ತಮ್ಮ ವರ್ತನೆಯನ್ನು ಮೊದಲು ತಿದ್ದಿಕೊಳ್ಳಬೇಕು. ತಮಗೂ ತಮ್ಮ ಮಕ್ಕಳಿಗೂ ಇರುವ ಸಂಬಂಧ ವನ್ನು ಮಾರ್ಪಡಿಸಿಕೊಳ್ಳಬೇಕು. ಮಕ್ಕಳಿಗೆ ತಮ್ಮಲ್ಲಿ ಭರವಸೆ ನಂಬಿಕೆಗಳು ಹುಟ್ಟುವಂತೆ ವರ್ತಿಸಬೇಕು.

ಹೀಗೆ ನೋಡಿಕೊಂಡರೂ ಹೆದರಿಕೆಗಳು ನಿಲ್ಲದೆ ಹೋದರೆ ಒಳತೋಟೆಯಿಂದ ಆ ಹೆದರಿಕೆಗಳು ಹುಟ್ಟಿರುವುವೆಂದು ತಿಳಿದು, ಮಗುವನ್ನು ವರ್ತನಾಚಿಕಿತ್ಸಾಲಯಕ್ಕೆ ಕರೆದುಕೊಂಡುಹೋಗಿ ವಿಶೇಷಜ್ಞರುಗಳಿಂದ ಸಲಹೆಯನ್ನು ಪಡೆದು ತಕ್ಕಂತೆ ನಡೆಯಬೇಕು.

## ಕೋಪ ಮತ್ತು ಅಸೂಯೆ

ಸಾಧಾರಣವಾಗಿ ಮಕ್ಕಳಲ್ಲಿ ಹೆದರಿಕೆಗಿಂತಲೂ ಕೋಪ ಹೆಚ್ಚು. ಅವರ ಚಲನವಲನಗಳಿಗೆ ಅಡಚಣೆಯುಂಟಾದರೆ ಅಥವಾ ದೈಹಿಕಕ್ರಿಯೆಗಳಿಗೆ ತಡೆಯುಂಟಾದರೆ ಆಗ ಕೋಪ ಬರುವುದು. ಮಗು ತನ್ನ ಕೈ ಕಾಲುಗಳನ್ನು ಬಡಿಯುತ್ತ ಅಳುವುದೇ ಈ ಕೋಪದ ಚಿಹ್ನೆ. ಆದರೆ ಮಗು ಬೆಳೆಯುತ್ತ ಬೆಳೆಯುತ್ತ ದೈಹಿಕಕ್ರಿಯೆ ಗಳಿಗೆ ಮಾತ್ರವೇ ಅಲ್ಲದೆ ಅದು ಮಾಡುವ ಯಾವ ಕೆಲಸಕ್ಕೇ ಆಗಲಿ ತಡೆಬಂದರೂ ಅದು ಕೋಪಗೊಳ್ಳುವುದು. ಉದಾಹರಣೆಗೆ— ಯಾರಾದರೂ ಮಗುವಿನ ಹತ್ತಿರದಿಂದ ಅದರ ಆಟದ ಸಾಮಾನು ಗಳನ್ನು ತೆಗೆದುಕೊಂಡರೆ ಅದಕ್ಕೆ ಸಿಟ್ಟು ಬರುವುದು.

ಮಕ್ಕಳಿಗೆ ಯಾವ ಯಾವ ಸನ್ನಿವೇಶಗಳಲ್ಲಿ ಕೋಪ ಬರುವು ದೆಂದು ಗುಡ್‌ಇನಫ್ ಎಂಬಾಕೆಯು ಪರೀಕ್ಷಿಸಿ ಮಗುವಿಗೆ ದೇಹಾ ಲಸ್ಯವಾದಾಗ, ಮಲಬದ್ಧತೆಯುಂಟಾಗಿರುವಾಗ ಕೋಪಬರುವುದು ಹೆಚ್ಚೆಂದು ಕಂಡುಹಿಡಿದಿರುವಳು.

ಮಕ್ಕಳು ಕೋಪಗೊಳ್ಳುವ ಸನ್ನಿವೇಶಗಳಲ್ಲಿ ಶೇಕಡ ೨೫ ರಷ್ಟು ಅವರ ವ್ಯಕ್ತಿತ್ವ ಮತ್ತು ಆತ್ಮಗೌರವಗಳಿಗೆ ಕುಂದು ಬಂದ ಸಂದರ್ಭಗಳಲ್ಲಿ ಉಂಟಾದುವು. ಮಕ್ಕಳನ್ನು ಹೊಡೆದರೆ, ಬೈದರೆ, ಹೀಯಾಳಿಸಿದರೆ, ಪರಿಹಾಸ್ಯಮಾಡಿದರೆ, ಅಣಕಿಸಿದರೆ ಅವರಿಗೆ ಬಹಳ ಜಾಗ್ರತೆ ಕೋಪಬರುವುದು. ಬೇರೆ ಮಕ್ಕಳನ್ನು ತಮ್ಮ ಮುಂದೆ ಊಟಕ್ಕೆ ಕರೆದು ಸ್ನಾನಕ್ಕೆ ಕರೆದು ಅಥವಾ ಬೇರೆ ರೀತಿ ಯಲ್ಲಿ ಅವರಿಗೆ ಪ್ರಾಧಾನ್ಯವನ್ನು ಕೊಟ್ಟರೆ ಮಕ್ಕಳಿಗೆ ಕೋಪ ಬರು ವುದು. ನಾಲ್ಕೈದು ವರ್ಷದ ಮಕ್ಕಳಿಗೆ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳಬೇಕೆಂಬ ಉತ್ಸಾಹವಿರುವುದು. ಆಗ ಹಿರಿಯರು ಆ ಉತ್ಸಾಹಕ್ಕೆ ಅಡ್ಡಿ ಬರುವಂತೆ ನಡೆದುಕೊಂಡರೆ, ಅಂದರೆ ಅದು ತಾನೇ ಸ್ನಾನಮಾಡಲು ಅಥವಾ ಬಟ್ಟೆ ಹಾಕಿಕೊಳ್ಳಲು ಪ್ರಯತ್ನ ಪಟ್ಟಾಗ ಇತರರು ಸಹಾಯಕ್ಕೆ ಹೋದರೆ ಮಗುವಿಗೆ ಕೋಪ ಬರು ವುದು. ಇಂತಹ ಕಾರಣಗಳು ಶೇಕಡ ೩೦ ರಷ್ಟಿರಬಹುದು. ಮಕ್ಕ ಳಿಗೆ ಕೋಪವನ್ನುಂಟುಮಾಡುವ ಸಂದರ್ಭಗಳಲ್ಲಿ ಶೇಕಡ ೩೦ರಷ್ಟು ಅವರ ಊಟ ಉಪಚಾರಗಳಿಗೆ ಸಂಬಂಧಿಸಿರುವುವು. ಅವರಿಗೆ ಹಸಿ ವಾದಾಗ ಆಹಾರವನ್ನು ಕೊಡಲು ತಡಮಾಡಿದರೆ ಅಥವಾ ನಿರಾಕರಿ ಸಿದರೆ ಇಲ್ಲವೇ ಊಟದ ಮಧ್ಯೆ ಅವರು ಕೇಳಿದ ತಿಂಡಿ ತೀರ್ಥಗಳನ್ನು ಕೊಡದಿದ್ದರೆ ಅವರಿಗೆ ಕೋಪ ಬರುವುದು. ಆದುದರಿಂದ ಮಕ್ಕ ಳಿಗೆ ಕೋಪವನ್ನುಂಟುಮಾಡುವ ಸಂದರ್ಭಗಳಲ್ಲಿ ಮೇಲಿನ ಮೂರು ಕಾರಣಗಳು ಶೇಕಡ ೭೫ರಷ್ಟಿರುವುವೆಂದು ಹೇಳಬಹುದು. ಉಳಿದ ಶೇಕಡ ೨೫ರಷ್ಟು ಕಾರಣಗಳು ವಿವಿಧ ಸಂದರ್ಭಗಳಿಗೆ ಸೇರಿದುವು.

ಇದುವರೆಗೂ ಕೋಪವನ್ನುಂಟುಮಾಡುವ ಸಂದರ್ಭಗಳನ್ನು ಪ್ರಸ್ತಾಪಿಸಲಾಯಿತು. ಇನ್ನು ಕೋಪಗೊಂಡ ಮಕ್ಕಳ ಮುಖ

ಭಾವದಲ್ಲಿ ಮತ್ತು ಅಂಗಚೇಷ್ಟೆಗಳಲ್ಲಿ ಉಂಟಾಗುವ ಬದಲಾವಣೆಗಳನ್ನು ನೋಡೋಣ. ಮೇಲೆ ಹೇಳಿದಂತೆ ಒಂದೆರಡು ತಿಂಗಳ ಮಕ್ಕಳಲ್ಲಿ ಕೋಪ ಉಂಟಾದಾಗ ಅವುಗಳ ಮುಖ ಕೆಂಪೇರುವುದು; ಕೈಕಾಲುಗಳನ್ನು ಬಡಿಯುವುವು; ಆದರೆ ಒಂದೂವರೆ ಎರಡು ವರ್ಷದ ಮಕ್ಕಳಾದರೋ ಪರಚುವುದು, ಕಚ್ಚುವುದು ಹೊಡೆಯುವುದು, ಕೈಗೆ ಸಿಕ್ಕಿದುದನ್ನು ಒಗೆಯುವುದು, ನೆಲದಮೇಲೆ ಬಿದ್ದು ಹೊರಳಾಡುವುದು ಮುಂತಾದ ವರ್ತನೆಗಳ ಮೂಲಕ ತಮ್ಮ ಕೋಪವನ್ನು ವ್ಯಕ್ತಪಡಿಸುತ್ತವೆ. ಇನ್ನೂ ಸ್ವಲ್ಪ ಬೆಳೆದು ಮಾತು ಬಂದ ಮೇಲೆ ಬಯ್ಯುವುದರ ಮೂಲಕ ತಮ್ಮ ಕೋಪವನ್ನು ಹೊರಪಡಿಸುತ್ತವೆ. ಕೆಲವು ವೇಳೆ ಇತರರ ಮೇಲಿನ ಕೋಪವನ್ನು ತಮ್ಮ ಆಟದ ಸಾಮಾನಿನ ಮೇಲೆ ತೋರಿಸುತ್ತವೆ ಮತ್ತು ದೊಡ್ಡವರಾದ ಮೇಲೆ ಬೇರೆಯವರ ಮೇಲೆ ಕೋಪಗೊಂಡು ತಮ್ಮ ಮುಖ ಮೈಗಳನ್ನೇ ಪರಚಿಕೊಳ್ಳುತ್ತವೆ ಅಥವಾ ಧರಿಸಿರುವ ಬಟ್ಟೆಯನ್ನು ಹರಿದುಹಾಕಿ ಬಿಡುತ್ತವೆ.

ಐದಾರು ವರ್ಷದ ಮಕ್ಕಳು ತಮ್ಮ ಕೋಪವನ್ನು ಬೇರೆ ವಿಧದಲ್ಲಿ ತೋರ್ಪಡಿಸಬಹುದು. ಮಾಡಬೇಡವೆನ್ನುವ ಕಾರ್ಯವನ್ನು ಮಾಡಿ ಹಿರಿಯರಿಗೆ ಅಸಮಾಧಾನವನ್ನುಂಟುಮಾಡುವರು. ಬೇರೆ ಮಕ್ಕಳ ಮೇಲೆ ಚಾಡಿ ಹೇಳಬಹುದು. ಸ್ಥಳಬಿಟ್ಟು ಕದಲದೆ ಕುಳಿತ ಕಡೆಯಲ್ಲಿಯೇ ಮೌನಧಾರಣೆ ಮಾಡಬಹುದು. ಆಟವಾಡುತ್ತಿರುವಾಗ ಸಂಗಡಿಗರ ಮೇಲೆ ಕೋಪಬಂದರೆ ಅವರ ಸಂಗ ಬಿಟ್ಟು ಅವರ ಆಟಕ್ಕೆ ಅಡ್ಡಿಯನ್ನು ತರಬಹುದು. ಆಟದಲ್ಲಿ ಅಸಹಕಾರವನ್ನು ಸೂಚಿಸಬಹುದು. ತಮ್ಮ ಕಾರ್ಯಕ್ಕೆ ಅಡ್ಡಿ ಬಂದ ಆಡಚಣೆಗಳನ್ನು ನಿವಾರಿಸಿಕೊಂಡು ತಮ್ಮ ಕಾರ್ಯವನ್ನು ಮುಂದುವರಿಸುವುದೇ ಕೋಪದ ಕೆಲಸ.

ಮಕ್ಕಳು ಬೆಳೆಯುತ್ತ ಬೆಳೆಯುತ್ತ ತಮ್ಮ ಕೋಪವನ್ನು ನಿಗ್ರಹಿಸಲು ಯತ್ನಿಸುವರು. ಈ ನಿಗ್ರಹಕ್ಕೆ ಎರಡು ಕಾರಣಗಳುಂಟು. ಒಂದು ಸ್ವಪ್ರಯತ್ನ ; ಇನ್ನೊಂದು ಸಾಮಾಜಿಕ ಅಡಚಣೆ. ನಾಲ್ಕೈದು ವರ್ಷದ ಮಕ್ಕಳು ತಾವು ಹಿಂದೆ ಕೋಪವನ್ನು ವ್ಯಕ್ತಗೊಳಿಸುವುದಕ್ಕಾಗಿ ಮಾಡುತ್ತಿದ್ದ ಅಂಗಚೇಷ್ಟೆಗಳನ್ನು ನಿಗ್ರಹಿಸಿ ತಮ್ಮ ಕೋಪವನ್ನು ನಾಗರಿಕ ರೀತಿಯಲ್ಲಿ ವ್ಯಕ್ತಗೊಳಿಸಲು ಕಲಿತುಕೊಳ್ಳುವರು. ಕೋಪವುಂಟಾದಾಗ ತಾಯಿತಂದೆಗಳು ಸಮಾಧಾನ ಹೇಳಿ ಕೋಪವನ್ನು ನಿಗ್ರಹಿಸಲು ಸಹಾಯ ಮಾಡುವರು. ಅನಾಗರಿಕ ರೀತಿಯಲ್ಲಿ ಕೋಪವನ್ನು ಹೊರಪಡಿಸಿದರೆ ಸಮಾಜವೂ ಅದನ್ನು ಅನುಮೋದಿಸುವುದಿಲ್ಲ. ಈ ಕಾರಣಗಳಿಂದ ಹುಡುಗರು ಬೆಳೆಯುತ್ತ ಬೆಳೆಯುತ್ತ ತಮ್ಮ ಕೋಪವನ್ನು ಹದ್ದಿನಲ್ಲಿಟ್ಟುಕೊಳ್ಳಲು ಪ್ರಯತ್ನಿಸುವರು.

ಮಕ್ಕಳು ಪದೇ ಪದೇ ಕೋಪಗೊಳ್ಳುವುದಕ್ಕೂ ಮತ್ತು ಕೋಪಗೊಂಡಾಗ ವರ್ತಿಸುವ ರೀತಿಗಳಿಗೂ ತಂದೆ ತಾಯಿಗಳ ಶಿಕ್ಷಣವೇ ಕಾರಣ. ಮಕ್ಕಳು ಹಟಹಿಡಿದು ಕೋಪದಿಂದಿರುವಾಗ ತಂದೆ ತಾಯಿಗಳು ಅವರನ್ನು ಸಮಾಧಾನಪಡಿಸಲು ಅನೇಕ ರೀತಿಯಲ್ಲಿ ವರ್ತಿಸುವರು. ಕೆಲವರು ತಾವೇ ಕೋಪಗೊಂಡು ಮಕ್ಕಳನ್ನು ಬಯ್ದು ಹೊಡೆದು ಅವರಲ್ಲಿ ಭೀತಿಯನ್ನುಂಟು ಮಾಡುವರು. ಮತ್ತೆ ಕೆಲವರು ಕೋಪವನ್ನು ಶಮನ ಮಾಡಲು ಮಕ್ಕಳಿಗೆ ಇಷ್ಟವಾದ ಪದಾರ್ಥವನ್ನು ಕೊಡುವರು. ಇಲ್ಲವೇ ಪ್ರಾರಂಭದಲ್ಲಿ ಕೋಪಗೊಂಡು ಕೊನೆಯಲ್ಲಿ ಮಕ್ಕಳ ಇಚ್ಛೆಯನ್ನು ಪೂರ್ತಿಗೊಳಿಸುವರು. ಇನ್ನೂ ಕೆಲವರು ಕೋಪಗೊಂಡಿರುವ ಮಕ್ಕಳನ್ನು ಪರಿಹಾಸ್ಯಮಾಡಿ ಮತ್ತಷ್ಟು ರೇಗಿಸುವರು, ಮಕ್ಕಳನ್ನು ಮಾತಾಡಿಸದೆ ದೂರ ಅಟ್ಟುವರು, ಅಥವಾ ಅವರ ಕೋಪವನ್ನು ಲಕ್ಷಿಸದೆ ಇರುವರು.

ತಾಯಿತಂದೆಗಳ ಈ ಒಂದೊಂದು ವರ್ತನೆಯೂ ಮಕ್ಕಳ ಮೇಲೆ ಒಂದೊಂದು ಪರಿಣಾಮವನ್ನುಂಟುಮಾಡುವುದು. ಮಕ್ಕಳನ್ನು ಹೊಡೆದು ಬೈದು ಅವರಲ್ಲಿ ಹೆದರಿಕೆಯನ್ನು ಹುಟ್ಟಿಸಿದರೆ ಅವರ ವ್ಯಕ್ತಿತ್ವದ ಬೆಳವಣಿಗೆಗೆ ಹಾನಿಯುಂಟಾಗುವುದು. ಮಗುವಿಗೆ ತಂದೆ ತಾಯಿಯಲ್ಲಿರುವ ಪ್ರೀತಿ ಮರ್ಯಾದೆಗಳು ಕಡಮೆಯಾಗುವುವು. ಕೋಪಗೊಂಡ ಮಕ್ಕಳಿಗೆ ಬೇಕಾದ ಉಪಚಾರವನ್ನು ಮಾಡಿ ಅವರ ಕೋಪವನ್ನು ನಿವಾರಿಸಲು ಯತ್ನಿಸುವುದೂ ದುಷ್ಪರಿಣಾಮಕರವಾದುದು; ತಮ್ಮ ಇಷ್ಟಪೂರ್ತಿಗಾಗಿ ಮಕ್ಕಳು ಪದೇ ಪದೇ ಹಟ ಹಿಡಿಯುವರು. ಹೀಗೆ ಹಟವನ್ನೇ ಅವರು ಒಂದು ಅಸ್ತ್ರವಾಗಿ ಮಾಡಿಕೊಳ್ಳುವರು.

ಮಕ್ಕಳ ಕೋಪವನ್ನು ಕಡಮೆ ಮಾಡಬೇಕಾದರೆ ತಂದೆ ತಾಯಿಗಳು ಅವರ ಕೋಪವನ್ನು ಲಕ್ಷಿಸದೆ ಇರಬೇಕು, ಮತ್ತು ಅವರಿಗೆ ತಮ್ಮ ಕೋಪದಿಂದ ಏನೂ ಪ್ರಯೋಜನವಿಲ್ಲವೆಂಬ ಅರಿವನ್ನುಂಟು ಮಾಡಬೇಕು. ಮಕ್ಕಳಿಗೆ ಕೋಪ ಬರುವ ವೇಳೆಯಲ್ಲಿ ಅವರ ಗಮನವನ್ನು ಮತ್ತೊಂದು ಕಡೆಗೆ ತಿರುಗಿಸಿದರೂ ಕೋಪ ಶಮನವಾಗುವುದು. ಮಗುವಿನ ಯಾವ ಇಚ್ಛೆಗೆ ಭಂಗಬಂದು ಕೋಪಗೊಂಡಿದೆಯೋ ಆ ಇಚ್ಛೆಯು ಮಗುವಿಗೆ ಒಳ್ಳೆಯದಲ್ಲವೆಂದು ತಾಯಿ ತಂದೆಗಳು ಬುದ್ಧಿ ಹೇಳುವುದರಿಂದಲೂ ಅನೇಕ ವೇಳೆ ಮಗು ಶಾಂತವಾಗುವುದು. ಮುಖ್ಯವಾಗಿ ತಂದೆ ತಾಯಿಗಳು ಮಗುವಿಗೆ ಕೋಪದಿಂದ ಎಳ್ಳಷ್ಟೂ ಲಾಭವಾಗುವುದಿಲ್ಲವೆಂಬುದನ್ನು ಸ್ಪಷ್ಟಪಡಿಸಬೇಕು. ಮತ್ತು ಈ ವಿಷಯ ಅವರ ಮನಸ್ಸಿಗೆ ನಾಟುವಂತೆ ವರ್ತಿಸಬೇಕು.

ಭಯ ಕೋಪಗಳಂತೆ ಅಸೂಯೆಯು ಒಂದು ಹುಟ್ಟುಗುಣವಲ್ಲ. ಮಗುವಿಗೆ ಅಸೂಯೆಯುಂಟಾಗಲು ತನ್ನ ತಂದೆತಾಯಿಗಳು ಇತರ

ಮಕ್ಕಳನ್ನು ಪ್ರೀತಿಸುವರೆಂಬ ಸಂಶಯವೂ, ತಂದೆತಾಯಿಗಳ ಪ್ರೀತಿಯು ತನ್ನಲ್ಲಿಯೇ ಪೂರ್ತಿಯಾಗಿರಬೇಕೆಂಬ ಆಸೆಯೂ ಮುಖ್ಯ ಕಾರಣಗಳು. ತನ್ನ ಸುತ್ತಮುತ್ತಲಿರುವ ಜನರು ತನ್ನ ಆಸೆಗೆ ಅಡ್ಡಿ ಬರುವುದರಿಂದ ಅಸೂಯೆ ಹುಟ್ಟುವುದು.

ಅಸೂಯೆಯು ಕೋಪವನ್ನುಂಟುಮಾಡುವುದು ಆದರೆ ಅಸೂಯೆಯಿಂದ ಹುಟ್ಟಿದ ಕೋಪವು ಸಾಮಾನ್ಯ ಕೋಪದಂತೆ ಕ್ಷಣಿಕವಲ್ಲ ; ದೀರ್ಘಕಾಲವಿರುವುದು. ಸಾಧಾರಣವಾಗಿ ದೊಡ್ಡ ಮಗುವಿಗೆ ಚಿಕ್ಕ ಮಗುವಿನ ಮೇಲೆ ಅಸೂಯೆಯುಂಟಾಗುವುದು.

ತನ್ನ ತಂಗಿಯನ್ನಾಗಲೀ ತಮ್ಮನನ್ನಾಗಲೀ ಹಾಲುಕೊಟ್ಟು ಆದರಿಸಿದರೆ ಈ ದೊಡ್ಡ ಮಗುವಿಗೆ ತಾಯಿಯ ಮೇಲೆ ಕೋಪವೂ, ಆದರ ಪಡೆಯುತ್ತಿರುವ ಮಗುವಿನ ಮೇಲೆ ಅಸೂಯೆಯೂ ಉಂಟಾಗುವುವು. ದೊಡ್ಡ ಮಗುವಿಗೆ ತನ್ನ ತಮ್ಮನ ಮೇಲೆ ಅಸೂಯೆ ಹುಟ್ಟಿದಾಗ ಅವನನ್ನು ಹೊಡೆಯುವುದು ಜಿಗುಟುವುದು ಅಥವಾ ತಳ್ಳುವುದು. ತನ್ನ ತಮ್ಮನಂತೆಯೇ ಆಟಗಳನ್ನಾಡಿ ತಂದೆತಾಯಿಗಳ ಪ್ರೀತಿಗೆ ಪಾತ್ರನಾಗಬೇಕೆಂಬ ಆಸೆ ಹುಟ್ಟಿ ದೊಡ್ಡ ಮಗುವೂ ಸಣ್ಣ ಮಗುವಿನಂತೆಯೇ ವರ್ತಿಸಲು ಆರಂಭಿಸುವುದು. ಈ ಅನುಕರಣಕ್ಕೆ ತಮ್ಮನ ಮೇಲಿನ ಅಸೂಯೆಯೇ ಮುಖ್ಯಕಾರಣ. ಹತ್ತು ಹನ್ನೆರಡು ತಿಂಗಳಿನ ಮಗು ಅಂಬೆಗಾಲಿಟ್ಟು ಆಡುತ್ತಿದ್ದರೆ ತಾಯಿಗೆ ಪ್ರೀತಿಹುಟ್ಟಿ ಅದನ್ನು ಎತ್ತಿ ಮುದ್ದಾಡುವಳು. ಇದನ್ನು ನೋಡುತ್ತಿರುವ ಮೂರು ನಾಲ್ಕು ವರ್ಷದ ಮಗುವು ತಾನೂ ಆ ರೀತಿ ಅಂಬೆಗಾಲಿಟ್ಟು ಆ ಮೂಲಕ ತಾಯಿಯ ಆದರವನ್ನು ಪಡೆಯಲು ಯತ್ನಿಸುವುದು. ಸಾಧಾರಣವಾಗಿ ದೊಡ್ಡ ಮಕ್ಕಳನ್ನು ಚಿಕ್ಕ ಮಕ್ಕಳು ಅನುಕರಿಸುವರು, ಆದರೆ ಇದಕ್ಕೆ ವ್ಯತಿರಕ್ತವಾಗಿ ಅಸೂಯೆಯಿಂದ ದೊಡ್ಡ ಮಕ್ಕಳು ಚಿಕ್ಕಮಕ್ಕಳನ್ನೇ ಅನುಕರಿಸುವರು.

ಅಸೂಯೆಯು ವಿಶೇಷವಾಗಿ ಕಾಣಿಸಿಕೊಳ್ಳುವುದು ಮೊದಲನೆಯ ಮಗುವಿನಲ್ಲಿಯೇ. ಏಕೆಂದರೆ ಮೊದಲನೆಯ ಮಗು ಎರಡು ಮೂರು ವರ್ಷಗಳ ಕಾಲ ಮನೆಯಲ್ಲಿರುವವರೆಲ್ಲರಿಗೂ ಮುದ್ದಿನ ಮಗುವಾಗಿರುವುದು. ಆದರೆ ಎರಡನೆಯ ಮಗು ಹುಟ್ಟಿದ ಮೇಲೆ ಮನೆಯವರು ಇದುವರೆಗೂ ಹಿರಿಯ ಮಗುವಿನ ಮೇಲಿಟ್ಟಿದ್ದ ಪ್ರೀತಿಯು ಸಣ್ಣ ಮಗುವಿನ ಕಡೆ ತಿರುಗುವುದರಿಂದ ಸಣ್ಣ ಮಗುವಿನ ಮೇಲೆ ದೊಡ್ಡ ಮಗುವಿನ ಅಸೂಯೆ ಹುಟ್ಟುವುದು. ಆದುದರಿಂದಲೇ ಸಾಮಾನ್ಯವಾಗಿ ಎರಡು ಮೂರು ಮಕ್ಕಳಿರುವ ಕುಟುಂಬದಲ್ಲಿಯೇ ಮಿತಿಮೀರಿದ ಅಸೂಯೆ ಕಂಡುಬರುವುದು. ನಾಲ್ಕಾರು ಮಕ್ಕಳಿರುವ ದೊಡ್ಡ ಕುಟುಂಬಗಳಲ್ಲಿ ಈ ಅಸೂಯೆ ಅಷ್ಟು ಹೆಚ್ಚಾಗಿ ಕಂಡುಬರುವುದಿಲ್ಲ. ಇದು ದೊಡ್ಡ ದೊಡ್ಡ ಕುಟುಂಬಗಳಲ್ಲಿ ಬೆಳೆದ ಮಕ್ಕಳಿಗಿರುವ ಒಂದು ಅನುಕೂಲ.

ಮನೆಯ ಮಕ್ಕಳ ಮೇಲೆ ಹುಟ್ಟಿದ ಅಸೂಯೆ ಕಾಲಕ್ರಮದಲ್ಲಿ ಮನೆಯ ಹೊರಗಿನವರ ಮೇಲಿನ ಹೊಟ್ಟೆಕಿಚ್ಚಾಗಿ ಪರಿಣಮಿಸುವುದು; ಬಾಲಕನು ಶಾಲೆಯಲ್ಲಿ ಓದುತ್ತಿರುವಾಗ ತನ್ನ ಜೊತೆಯಲ್ಲಿರುವವರಿಗೆ ಆಟಪಾಟಗಳಲ್ಲೇನಾದರೂ ಬಹುಮಾನ ದೊರೆತರೆ ಅವರ ಮೇಲೆ ಅಸೂಯೆಪಡುವನು. ಅಸೂಯೆಯು ಬಹುವಾಗಿ ಬೆಳೆದವರಿಗೆ ಜೀವನದಲ್ಲಿ ಸುಖವಿಲ್ಲದಂತಾಗುವುದು. ಸಮಾಜದಲ್ಲಿ ಸಾಮಾನ್ಯವಾಗಿ ನಾವು ಅನುಭವಿಸುವ ವ್ಯಸನಗಳು ನಮ್ಮ ಇಚ್ಛೆಗೆ ಕುಂದಕ ಬಂದುದರಿಂದ ಉಂಟಾದುದಕ್ಕಿಂತಲೂ ನಮಗೆ ದೊರೆಯದಿದ್ದುದು ಬೇರೆಯವರಿಗೆ ಸಿಕ್ಕಿತಲ್ಲಾ ಎಂಬ ಹೊಟ್ಟೆಕಿಚ್ಚಿನಿಂದ ಉಂಟಾದುವು. ಆದುದರಿಂದ ಸಣ್ಣ ಮಕ್ಕಳಲ್ಲಿಯೇ ಅಸೂಯೆಯ ಮೊಳಕೆಯನ್ನು ಬೇರುಸಹಿತ ಕಿತ್ತುಹಾಕುವುದು ತಂದೆತಾಯಿಗಳ ಮುಖ್ಯ ಕರ್ತವ್ಯ. ಹುಡುಗರಲ್ಲಿ ಅಸೂಯೆ ಬೆಳೆಯದಂತೆ

ನೋಡಿಕೊಳ್ಳುವುದು ಶಿಕ್ಷಣದ ಒಂದು ಮುಖ್ಯ ಧ್ಯೇಯ. ತಂದೆ ತಾಯಿಗಳು ಮಕ್ಕಳ ವಿಷಯದಲ್ಲಿ ಅತಿ ಪ್ರೇಮವನ್ನಾಗಲಿ ಅತಿ ಉದಾಸೀನತೆಯನ್ನಾಗಲಿ ತೋರಿಸದೆ ಇರಬೇಕು. ಅತಿಯಾಗಿ ಮುದ್ದಿಸಲೂ ಬಾರದು; ಅತಿಯಾಗಿ ದಂಡಿಸಲೂ ಕೂಡದು. ಮಕ್ಕಳ ಪೋಷಣೆಯ ವಿಚಾರದಲ್ಲಿ ಹಿರಿಯರು ಮಧ್ಯವರ್ತನೆಯನ್ನು ಅನುಸರಿಸಬೇಕಾದುದು ಬಹು ಮುಖ್ಯವಾದುದು.

## ನಗು ಮತ್ತು ಅಳು

ನಗು ಮತ್ತು ಅಳು ಭಾವಗಳಲ್ಲ; ಆದರೂ ಇವು ಸಂತೋಷ, ಕೋಪ, ಭಯ ಮುಂತಾದ ಭಾವಗಳೊಂದಿಗೆ ತೋರ್ಪಡಿಸಿ ಕೊಳ್ಳುವ ಮತ್ತು ಆ ಭಾವಗಳಿಗೆ ಹತ್ತಿರ ಸಂಬಂಧದ ವರ್ತನೆ ಗಳು. ಇವು ಯಾವ ರೀತಿ ಹುಟ್ಟಿ ಬೆಳೆಯುವುವೆಂಬುದನ್ನು ನೋಡೋಣ. ಹತ್ತು ಹದಿನೈದು ದಿನಗಳ ವಯಸ್ಸಿನ ಮಗು ಕೆಲವು ಸಮಯಗಳಲ್ಲಿ ಮುಗುಳ್ನಗೆಯನ್ನು ತೋರಿಸುವುದು. ಸಾಮಾ ನ್ಯವಾಗಿ ಮಗು ಹಾಲು ಕುಡಿದು ತೃಪ್ತಿಯಿಂದಿರುವಾಗ ಈ ಮುಗು ಳ್ನಗೆ ಕಾಣಬರುವುದು. ಒಂದೂವರೆ ಎರಡು ತಿಂಗಳ ವಯ ಸ್ಸಿನ ಮಗು ತಾಯಿಯನ್ನು ನೋಡಿದಾಗ ಅಥವಾ ಆಕೆಯ ದನಿ ಯನ್ನು ಕೇಳಿದಾಗ ಮುಗುಳ್ನಗೆ ನಗುವುದು. ತಂದೆ ತಾಯಿಗಳನ್ನು ನೋಡಿ ಉಂಟಾಗುವ ಈ ವರ್ತನೆ ಸಂಸರ್ಗಜನ್ಯವಾದುದೆಂದು ಶಾಸ್ತ್ರಜ್ಞರು ಅಭಿಪ್ರಾಯಪಡುವರು. ಮೊದಮೊದಲು ದೈಹಿಕ ತೃಪ್ತಿಯೇ ಈ ಮುಗುಳ್ನಗೆಗೆ ಕಾರಣವಾದರೂ ಕಾಲಕ್ರಮದಲ್ಲಿ ಈ ತೃಪ್ತಿಯನ್ನುಂಟುಮಾಡುವವರನ್ನು, ಅಷ್ಟೇ ಅಲ್ಲ, ತೃಪ್ತಿಪಡೆದಿರುವ ಸಮಯದಲ್ಲಿ ಹತ್ತಿರ ಇರುವವರನ್ನು ನೋಡಿದಾಗಲೂ ಸಹ ಮುಗು ಳ್ನಗೆಯನ್ನು ಹೊರಸೂಸುವುದು.

ಮೂರು ನಾಲ್ಕು ತಿಂಗಳ ಮಕ್ಕಳ ಮುಂದೆ ದೊಡ್ಡವರು ಕೋಪ, ಭಯ ಮುಂತಾದ ಭಾವೋದ್ರೇಕಗಳನ್ನು ವ್ಯಕ್ತಪಡಿಸಿದರೂ ಮುಗುಳ್ನಗೆ ಉಂಟಾಗುವುದು. ಈ ವಯಸ್ಸಿನ ಮಕ್ಕಳಲ್ಲಿ ಎಲ್ಲಾ ಭಾವೋದ್ರೇಕಗಳಿಗೂ ಒಂದೇ ಪ್ರತಿಕ್ರಿಯೆ. ಆದರೆ ಆರೇಳು ತಿಂಗಳ ಮಗು ನಾವು ತೋರಿಸುವ ಭಾವೋದ್ರೇಕಕ್ಕನುಗುಣವಾಗಿ ಮುಖಭಾವವನ್ನು ಪ್ರತಿಕ್ರಿಯೆಯಾಗಿ ವ್ಯಕ್ತಪಡಿಸುವುದು. ನಾವು ನಕ್ಕರೆ ಅದು ನಗುವುದು ; ಕೋಪವನ್ನು ತೋರಿಸಿದರೆ ಭಯವನ್ನು ವ್ಯಕ್ತಪಡಿಸುವುದು. ಹತ್ತು ಹನ್ನೆರಡು ತಿಂಗಳು ತುಂಬಿದ ಮೇಲೆ ನಾವು ಕೋಪಗೊಂಡಂತೆ ನಟನೆ ಮಾಡಿದಾಗ ಮಗು ಮೊದಲಲ್ಲಿ ಭಯವನ್ನು ವ್ಯಕ್ತಪಡಿಸಿ ಅನಂತರ ಮುಗುಳ್ನಗೆಯನ್ನು ಹೊರಸೂಸುವುದು.

ಒಂದು ತಿಂಗಳ ವಯಸ್ಸಿನ ಮಗು ಯಾವುದಾದರೂ ಬಣ್ಣದ ಸಾಮಾನುಗಳನ್ನು ಕಂಡರೆ ನಗುವುದು. ಇನ್ನು ಕೆಲವು ದಿನಗಳು ಕಳೆದನಂತರ ಇಂಪಾದ ಶಬ್ದವನ್ನು ಕೇಳಿದರೆ ಅಥವಾ ತನಗೆ ಪರಿಚಯವಾದವರ ಮುಖವನ್ನು ನೋಡಿದರೆ ನಗುವುದು. ಮೂರು ತಿಂಗಳ ಮಗು ಹತ್ತಿರ ಹೋಗಿ ಆಟವಾಡಿಸಿ ಮಾತಾಡಿಸಿದರೆ ನಗುವುದು. ನಾಲ್ಕು ತಿಂಗಳು ವಯಸ್ಸಿನ ಮಗುವಿನ ಮುಂದೆ ದೊಡ್ಡವರು ತಮ್ಮ ಮುಖದ ಮೇಲೆ ಪರದೆಯಂತೆ ಬಟ್ಟೆಯನ್ನು ಹಾಕಿ ತಕ್ಷಣವೆ ಪರದೆಯನ್ನು ತೆಗೆದರೆ ಮಗು ಕೇಕೆ ಹಾಕಿಕೊಂಡು ನಗುವುದು. ಮುಖದ ಮೇಲೆ ಬಗ್ಗಿ " ಬೂ " ಎಂದರೆ ನಗುವುದು. ಆರು ತಿಂಗಳ ಮಗುವನ್ನು ಅಂಗೈಮೇಲಿಟ್ಟುಕೊಂಡು ಮೇಲಕ್ಕೆ ಸ್ವಲ್ಪ ಹಾರಿಸಿ ಕೆಳಗೆ ಬರುವಾಗ ಆತುಕೊಂಡರೆ ಹಿಗ್ಗಿ ಹಿಗ್ಗಿ ನಗುವುದು. ಹೀಗೆ ಮಾಡಿದಾಗ ಮೊದಲಲ್ಲಿ ಮಗು ಸ್ವಲ್ಪ ಭಯದ ಸೂಚನೆಯನ್ನು ತೋರಿ ಭಯಪಡಬೇಕಾದುದಿಲ್ಲವೆಂಬುದನ್ನು ಮನಗಂಡೊಡನೆಯೇ ನಗು ಹುಟ್ಟುವುದು.

ಮಗು ಬೆಳೆಯುತ್ತ ಬೆಳೆಯುತ್ತ ನಗುವನ್ನು ಹುಟ್ಟಿಸುವ ಸನ್ನಿವೇಶಗಳೂ ಹೆಚ್ಚುವುವು. ಮೊಟ್ಟಮೊದಲು ದೈಹಿಕ ತೃಪ್ತಿಗೆ ಸಂಬಂಧಪಟ್ಟ ಸನ್ನಿವೇಶಗಳೂ, ಅನಂತರ ಸಲಿಗೆಯ ಜನರು ದೃಷ್ಟಿಗೋಚರವಾಗುವುದೂ, ಆಮೇಲೆ ಭಯವನ್ನುಂಟುಮಾಡುವಂತೆ ಕಂಡುಬಂದು ನಿಜವಾಗಿಯೂ ಭಯಂಕರವಲ್ಲವೆಂದು ತಿಳಿಯುವ ಸನ್ನಿವೇಶಗಳೂ, ಇನ್ನೂ ಸ್ವಲ್ಪ ಕಾಲದನಂತರ ವಿಚಿತ್ರವಾದ ಆಟದ ಸಾಮಾನುಗಳೂ ಮಗುವಿನ ನಗುವಿಗೆ ಕಾರಣವಾಗುವುವು. ಒಂದೂವರೆ ಎರಡು ವರ್ಷ ವಯಸ್ಸಾದ ಮೇಲೆ ನಗು ಮಗುವಿನ ಗೆಲವು ಉತ್ಸಾಹಗಳನ್ನು ಸೂಚಿಸುವುದು. ಈ ವಯಸ್ಸಿನಲ್ಲಿ ಮಗು ಯಾವುದಾದರೂ ಪದಾರ್ಥಗಳಿಂದ ಶಬ್ದವನ್ನು ಮಾಡಿದಾಗ ಇಲ್ಲವೆ ಮರಳಿನಿಂದಲೋ ಮರದ ತುಂಡುಗಳಿಂದಲೋ ಮನೆಯನ್ನು ಕಟ್ಟಿದಾಗ ಉಂಟಾಗುವ ಅದರ ಉತ್ಸಾಹ ನಗುವಾಗಿ ಪರಿಣಮಿಸುವುದು. ಆಡುವಾಗ ಒಂದು ಮಗು ಮತ್ತೊಂದು ಮಗುವನ್ನು ಹಿಡಿಯಲು ಓಡಿದಾಗ ಆ ಮಗು ಸಿಕ್ಕದೆ ತಪ್ಪಿಸಿಕೊಂಡರೆ ಈ ವಿನೋದ ಇಬ್ಬರಿಗೂ ನಗುವನ್ನುಂಟುಮಾಡುವುದು. ಓಡಾಟಗಳು ಈ ವಯಸ್ಸಿನ ಮಕ್ಕಳಿಗೆ ನಗುವನ್ನುಂಟುಮಾಡುವ ಸನ್ನಿವೇಶಗಳಾಗುವುವು.

ಮೂರುನಾಲ್ಕು ವರ್ಷಗಳ ಮಗು ತಾನು ಮಾಡಿದ ತಪ್ಪುಗಳನ್ನು ತಿಳಿದು ತಾನೇ ನಗಲಾರಂಭಿಸುವುದು. ಇದು ಮಕ್ಕಳ ಬೆಳೆವಣಿಗೆಯಲ್ಲಿ ಒಂದು ಮುಖ್ಯವಾದ ಒಳ್ಳೆಯ ಅಂಶ. ಸೇಡನ್ನೂ ನಿರಾಶೆಯನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಅದನ್ನೇ ಪರಿಹಾಸ್ಯಕರವಾಗಿ ಎಣಿಸಿ ನಗುವುದು ರಕ್ಷಣೆಯ ಉಪಾಯ. ಈ ಹಾಸ್ಯ ಮನೋಭಾವವನ್ನು ಚಿಕ್ಕಂದಿನಿಂದಲೂ ಮಕ್ಕಳಲ್ಲಿ ಬೆಳೆಯುವಂತೆ ಪ್ರೋತ್ಸಾಹಿಸಬೇಕು. ಹಾಗಿಲ್ಲದಿದ್ದರೆ, ಮಕ್ಕಳು ದೊಡ್ಡವರಾದಾಗ ಕಷ್ಟ

ನಿಷ್ಠುರಗಳನ್ನೂ ಸೇಡು ನಿರಾಕರಣೆಗಳನ್ನೂ ಬಹುವಾಗಿ ಮನಸ್ಸಿಗೆ ಹಚ್ಚಿಕೊಂಡು ಕೊರಗುವ ಮನೋವೃತ್ತಿಯುಳ್ಳವರೂ, ನಿರಾಶಾವಾದಿಗಳೂ ಆಗುವರು.

ಹುಟ್ಟಿದ ಕೂಡಲೇ ಮಗು ಅಳಲಾರಂಭಿಸುವುದು. ಈ ಅಳು "ನಾನು ಭೂಲೋಕದಲ್ಲಿ ಹುಟ್ಟಿದೆನಲ್ಲಾ" ಎಂಬ ಪರಿತಾಪವಲ್ಲ; ಜನಿಸಿದ ಕೂಡಲೆ ದೇಹಾದ್ಯಂತದಲ್ಲುಂಟಾಗುವ ಚಲನೆಯೇ ಅಳುವಿಗೆ ಕಾರಣ. ಮೊಟ್ಟಮೊದಲನೆಯ ಬಾರಿ ಶ್ವಾಸವನ್ನು ತೆಗೆದುಕೊಂಡಾಗ ಉಂಟಾಗುವ ಶಬ್ದವೇ ಅಳು.

ಎಳೆಯ ಮಗುವಿನಲ್ಲಿ ಶ್ವಾಸಕೋಶ, ಕರುಳು ಹೊಟ್ಟೆ ಮೊದಲಾದ ಅವಯವಗಳ ಅಸ್ವಸ್ಥತೆಯು ಅಳುವಿಗೆ ಕಾರಣವಾಗುವುದು. ಕಾಲಕ್ರಮದಲ್ಲಿ ಇತರ ಅವಯವಗಳಲ್ಲಿ ಹುಟ್ಟಿರುವ ನೋವು, ದೇಹಾಲಸ್ಯ, ನಿದ್ರಾಭಂಗ, ಹಸಿವುಗಳು ಅಳುವಿಗೆ ಕಾರಣವಾಗುವವು. ಹಸಿವು ನೋವುಗಳು ನಿವಾರಣೆಯಾದರೆ ಅಳು ನಿಲ್ಲುವುದು. ಅಳುವಾಗ ಮಗುವನ್ನು ಎತ್ತಿಕೊಂಡರೂ ಕೆಲವು ವೇಳೆ ಅಳುವನ್ನು ನಿಲ್ಲಿಸುವುದು. ಆರೆಂಟು ತಿಂಗಳ ಮಗು ಹೆದರಿಕೆಯುಂಟಾದಾಗ ಅಥವಾ ಏಟು ತಗುಲಿದಾಗ ಅಳುವುದು. ತನ್ನ ಇಷ್ಟಕ್ಕೆ ಅಡ್ಡಿ ಬಂದಾಗ ಕೋಪವೂ ಅದರೊಡನೆ ಅಳುವೂ ಹುಟ್ಟುವುವು. ಮೂರು ನಾಲ್ಕು ವರ್ಷದ ಮಕ್ಕಳಲ್ಲಿ ದೇಹಾಲಸ್ಯಕ್ಕಿಂತಲೂ ಹೆಚ್ಚಾಗಿ ಕೋಪವೇ ಅವರ ಅಳುವಿಗೆ ಕಾರಣ.

ಅನೇಕ ವೇಳೆ ಮಗು ಅಳುವಿನ ಮೂಲಕ ತನ್ನ ಆಸೆಗಳನ್ನು ಪೂರೈಸಿಕೊಳ್ಳಲು ಯತ್ನಿಸುವುದು. ಕಷ್ಟನಿವಾರಣೆಗಾಗಿ ಅಲ್ಲ ಅಳುವುದು; ತನ್ನ ಆಸೆಯ ಪರಿತೃಪ್ತಿಗಾಗಿ. ಮಗು ದೇಹದ ಅಸ್ವಸ್ಥತೆಯಿಂದ ಅತ್ತರೆ ತಂದೆ ತಾಯಿಗಳು ಅಸ್ವಸ್ಥತೆಯನ್ನು ದೂರಮಾಡುವುದೂ ಸಮಾಧಾನ ಮಾಡುವುದೂ ಉಚಿತ; ಆದರೆ ಮಗು ತನ್ನ

ಬಯಕೆಗಳನ್ನು ಈಡೇರಿಸಿಕೊಳ್ಳಲು ಅತ್ತರೆ ಆಗ ತಂದೆ ತಾಯಿಗಳು ಮಗುವನ್ನು ಆಲಸ್ಯಭಾವದಿಂದ ಕಾಣಬೇಕು. ಇಲ್ಲದಿದ್ದರೆ ತನಗೆ ಏನು ಬೇಕಾದರೂ ಮಗು ಅತ್ತು ಕಾಡುವುದು. ಈ ರೀತಿಯ ವರ್ತನೆ ಮಗುವಿನ ಮನಸ್ಸಿನ ಬೆಳವಣಿಗೆಗೆ ಒಳ್ಳೆಯದಲ್ಲ. ಇಂತಹ ಮಕ್ಕಳು ದೊಡ್ಡವರಾದ ಮೇಲೆಯೂ ತಮಗೆ ಬೇಕಾದ ಕೆಲಸಗಳನ್ನು ತಾವೇ ಮಾಡಿಕೊಳ್ಳಲು ಯತ್ನಿಸದೆ, ತಮಗೊದಗಿದ ಕಷ್ಟಗಳನ್ನು ತಾವೇ ಬುದ್ಧಿವಂತಿಕೆಯಿಂದ, ಶ್ರಮಪಟ್ಟು, ಬಗೆಹರಿಸಿ ಕೊಳ್ಳದೆ ಇತರರ ಮುಂದೆ ಗೋಳಾಡಿ ಅವರ ಸಹಾಯವನ್ನು ಬೇಡಿ ಪಡೆಯಲು ಪ್ರಯತ್ನಿಸುವುವು. ಆತ್ಮಭರವಸೆ, ಸ್ವಪ್ರಯತ್ನ, ಕಷ್ಟ ಸಹಿಷ್ಣುತೆ ಮುಂತಾದ ಸದ್ಗುಣಗಳು ಮಾಸಿಹೋಗುವುವು.



ಜಾರುಗುಪ್ಪೆ



ಏತ



ఎకే ఆట

# ಅಧ್ಯಾಯ ೭.

## ಮಕ್ಕಳ ಆಟಗಳು

ಕೀಳ್ತರಗತಿಯ ಪ್ರಾಣಿಗಳ ಬಾಲ್ಯಾವಸ್ಥೆಯ ಅವಧಿಯು ಬಹು ಸ್ವಲ್ಪ. ಮೇಲ್ತರಗತಿಯ ಪ್ರಾಣಿಗಳಲ್ಲಿಯಾದರೋ ಬಾಲ್ಯಾವಸ್ಥೆಯ ಅವಧಿಯು ದೀರ್ಘವಾಗಿರುವುದು. ಇದೇ ಮೇಲ್ತರಗತಿಯ ಪ್ರಾಣಿಗಳಿಗೂ ಕೀಳ್ತರಗತಿಯ ಪ್ರಾಣಿಗಳಿಗೂ ಇರುವ ಒಂದು ಮುಖ್ಯ ವ್ಯತ್ಯಾಸ. ಕ್ರಿಮಿಕೀಟಗಳು ಹುಟ್ಟಿದ ಒಂದೆರಡು ಗಂಟೆಗಳೊಳಗಾಗಿ ಆ ವರ್ಗದ ಹಿರಿಯ ಪ್ರಾಣಿಗಳು ಮಾಡುವ ಕೆಲಸಗಳನ್ನೆಲ್ಲಾ ಮಾಡುವುವು. ಇವುಗಳಿಗೆ ಬಾಲ್ಯಾವಸ್ಥೆಯೇ ಇಲ್ಲವೆಂದು ಹೇಳಬಹುದು. ಕಣಜದ ಮರಿಯು ಗೂಡಿನಿಂದ ಹೊರಗೆ ಬರುವಾಗಲೇ ಹಾರಿ ತಾಯಿ ಕಣಜದಂತೆಯೇ ಆಹಾರಾರ್ಥವಾಗಿ ಸಂಚಾರ ಹೊರಡುವುದು. ಹೀಗೆಯೇ ಹಾವಿನ ವರ್ಗಕ್ಕೆ ಸೇರಿದ ಜಂತುಗಳೂ, ಪಕ್ಷಿವರ್ಗಕ್ಕೆ ಸೇರಿದ ಜಂತುಗಳೂ ಒಂದೆರಡು ದಿನಗಳೊಳಗಾಗಿ ಪ್ರಾಯಗೊಳ್ಳುವುವು. ಆದರೆ ಸ್ತನ್ಯಪಾನಿಗಳಾದ ಇಲಿ, ಮೊಲ ಮುಂತಾದುವುಗಳಲ್ಲಿ ಬಾಲ್ಯಾವಸ್ಥೆಯು ಒಂದೆರಡುವಾರಗಳ ವರೆಗೆ ಇರುವುದು. ಸಾಧಾರಣ ಕೋತಿಗಳಲ್ಲಿಯೂ, ಕಾಡು ಮನುಷ್ಯನ ಜಾತಿಯ ಕೋತಿಗಳಲ್ಲಿಯೂ ಮನುಷ್ಯರಂತೆಯೇ ಬಾಲ್ಯಾವಸ್ಥೆಯು ದೀರ್ಘಕಾಲವಿರುವುದು. ಬುದ್ಧಿಶಕ್ತಿಯನ್ನುಪಯೋಗಿಸಿ ಹೊರ ಪರಿಸ್ಥಿತಿಗಳಿಗೆ ಹೊಂದಿಕೊಂಡು ಬಾಳುವ ಪ್ರಾಣಿಗಳಲ್ಲಿಯೂ ಬಾಲ್ಯಾವಸ್ಥೆಯು ದೀರ್ಘಕಾಲವಿರುವುದು. ಕ್ರಿಮಿಕೀಟಗಳ ಜೀವನವು ಸ್ವಭಾವಸಿದ್ಧ ಶಕ್ತಿಗಳನ್ನುಪಯೋಗಿಸಿ ಯಾವ ಕಲಿಯುವಿಕೆಯೂ ಇಲ್ಲದೆ ಒಂದೇ ರೀತಿಯಿಂದ ಸಾಗುವುದು.

ಉಚ್ಚವರ್ಗದ ಪ್ರಾಣಿಗಳಾದರೋ ಹೊಸ ಸನ್ನಿವೇಶಗಳಿಗೆ ಹೊಂದಿಕೊಂಡು ಬಾಳುವುವು. ಮನುಷ್ಯವರ್ಗದಲ್ಲಿ ಈ ಶಕ್ತಿಯು ಹೆಚ್ಚಾಗಿರುವುದರಿಂದಲೇ ಸಂಸ್ಕೃತಿಯು ಬೆಳೆಯುವುದಕ್ಕೆ ಅವಕಾಶವುಂಟಾಯಿತು. ಸಂಸ್ಕೃತಿಯು ಬೆಳದಂತೆಲ್ಲ ಮಕ್ಕಳು ಕಲಿಯಬೇಕಾದ ಅಂಶಗಳು ಹೆಚ್ಚಾಗುತ್ತಾ ಬರುವುದು. ಆದುದರಿಂದ ಸಂಸ್ಕೃತಿ ಬೆಳೆದಂತೆಲ್ಲಾ ಬಾಲ್ಯಾವಸ್ಥೆಯು ದೀರ್ಘವಾಗುತ್ತಾ ಬರುವುದು. ಹಿಂದುಳಿದ ಗ್ರಾಮಸ್ಥರಲ್ಲಿ ನಾಗರಿಕತೆ ಕಡಮೆಯಾಗಿರುವುದರಿಂದ ಸಾಮಾನ್ಯವಾಗಿ ಬಾಲ್ಯಾವಸ್ಥೆಯು ಆರೆಂಟು ವರ್ಷಗಳು ಮಾತ್ರವಿರುವುದು. ಹತ್ತು ವರ್ಷದ ಹಳ್ಳಿಯ ಹುಡುಗರು ತಮ್ಮ ತಂದೆ ತಾಯಿಗಳು ಮಾಡುವ ಸಮಸ್ತ ಕೆಲಸಗಳನ್ನೂ ಮಾಡಬಲ್ಲರು. ಅನಂತರ ಅವರು ಕಲಿಯಬೇಕಾದ ಅಂಶಗಳು ಯಾವುದೂ ಉಳಿದಿರುವುದಿಲ್ಲ. ಆದರೆ ಹೆಚ್ಚು ಸಂಸ್ಕೃತಿಯನ್ನು ಪಡೆದಿರುವ ಪಟ್ಟಣವಾಸಿಗಳಲ್ಲಿ ಇಪ್ಪತ್ತು ವರ್ಷ ವಯಸ್ಸಿನ ವರೆಗೂ ವಯಸ್ಕರ ಸ್ಥಿತಿಯನ್ನು ಪಡೆಯಲು ಸಾಧ್ಯವಿಲ್ಲ. ಹಳೆಯಕಾಲದ ಪದ್ಧತಿಯ ಪ್ರಕಾರ ಹನ್ನೆರಡು ಹದಿಮೂರು ವರ್ಷಗಳ ಹೆಣ್ಣುಮಗಳಿಗೆ ಮದುವೆಯಾದರೆ ಅಂದಿನಿಂದಲೇ ಅವಳು ವಯಸ್ಕಳಾಗುವಳು. ಮನೆಯ ಕೆಲಸ, ಮಕ್ಕಳನ್ನು ನೋಡಿಕೊಳ್ಳುವುದು ಇವೆಲ್ಲವೂ ಆರಂಭವಾಗುವುವು. ಇದರಿಂದಲೇ ಸಂಸ್ಕೃತಿ ಬೆಳೆದಂತೆಲ್ಲಾ ವಿದ್ಯಾಭ್ಯಾಸದ ಮಿತಿಯು ಹೆಚ್ಚುತ್ತ ಹೋಗುವುದು. ಎಂದರೆ ಬ್ರಹ್ಮಚಾರಿಪು ಅವಧಿಯು ದೀರ್ಘವಾಗುತ್ತ ಹೋಗುವುದು. ಇತ್ತೀಚೆಗೆ ಪಟ್ಟಣಗಳಲ್ಲಿ ಹೆಣ್ಣುಮಕ್ಕಳೂ, ಗಂಡುಮಕ್ಕಳೂ, ಪ್ರೌಢ ವಿದ್ಯಾಭ್ಯಾಸವನ್ನು ಮುಗಿಸಿದನಂತರ ಇಪ್ಪತ್ತು ಇಪ್ಪತ್ತನಾಲ್ಕು ವರ್ಷ ವಯಸ್ಸಿಗೆ ಮದುವೆಮಾಡಿಕೊಳ್ಳುವರು.

ಬಾಲ್ಯಾವಸ್ಥೆಯಲ್ಲಿ ಮನುಷ್ಯನಾಗಲಿ ಮೃಗವಾಗಲಿ ಆಟ

ಮಾಡುವುದರ ಮೂಲಕ ಕುಶಲತೆ ತಿಳಿವಳಿಕೆಗಳನ್ನು ಪಡೆಯುವುದು. ನಾಯಿ ಬೆಕ್ಕುಗಳೂ, ಕೋತಿಗಳೂ ವಯಸ್ಸಿಗೆ ಬರುವ ವರೆಗೂ ಆಟ ಮಾಡುತ್ತಿರುವುವು. ಆದರೆ ಮನುಷ್ಯರಲ್ಲಿ ಇಪ್ಪತ್ತು ವರ್ಷಗಳ ವರೆಗೂ ಯಾವ ಜವಾಬ್ದಾರಿಯೂ ಇಲ್ಲದೆ ಹೊಟ್ಟೆಗಾಗಿ ದುಡಿಯದೆ ಬೆಳೆಯಲು ಸಾಧ್ಯ.

ಮಕ್ಕಳು ತಮ್ಮ ಆಟಗಳ ಮೂಲಕ ಪ್ರಕೃತಿ ಜ್ಞಾನವನ್ನೂ ಸಮಾಜ ಜ್ಞಾನವನ್ನೂ ಪಡೆಯುವರು. ಒಂದೊಂದು ವಯಸ್ಸಿನ ಮಗು ಒಂದೊಂದು ತರಹದ ಆಟದಲ್ಲಿ ಅಭಿರುಚಿಯನ್ನು ತೋರಿಸುವುದು. ಮಗುವಿನ ಆಟ ಅದರ ಬೆಳವಣಿಗೆಯನ್ನು ಅನುಸರಿಸಿ ಮುಂದುವರಿಯುವುದು. ಹುಟ್ಟಿದ ಮೊದಲ ವಾರದಲ್ಲಿ ಎಚ್ಚರಗೊಂಡಿರುವ ಮಗು ತನ್ನ ಕಣ್ಣುಗಳ ಮೂಲಕ ಪ್ರಪಂಚ ಜ್ಞಾನವನ್ನು ಪಡೆಯುವುದು. ಇನ್ನು ಸ್ವಲ್ಪ ಬೆಳೆದಮೇಲೆ ಬಾಯಿಯ ಮೂಲಕ ಪ್ರಪಂಚ ಜ್ಞಾನವನ್ನು ಪಡೆಯುವುದು. ಕೈಯಲ್ಲಿ ಹಿಡಿದುದನ್ನೆಲ್ಲಾ ಬಾಯಲ್ಲಿಟ್ಟು ಅದರ ಆಕಾರ ಗಾತ್ರ ಮೃದುತ್ವ ಕಾಠಿನ್ಯಗಳ ತಿಳಿವಳಿಕೆಯನ್ನು ಪಡೆಯುವುದು. ಒಂದು ವರ್ಷ ವಯಸ್ಸಿನಲ್ಲಿ ಮಗುವಿನ ಆಟ ಶಬ್ದಮಾಡುವುದನ್ನು ಅನುಸರಿಸುವುದು. ಈ ವಯಸ್ಸಿನಲ್ಲಿ ಕೇಳಿದ ಶಬ್ದಗಳನ್ನೆಲ್ಲಾ ಪದೇ ಪದೇ ಉಚ್ಚಾರಮಾಡಿ ಪದಗಳ ಪ್ರಯೋಗವನ್ನು ಕಲಿಯುವುದು. ಎರಡು ಮೂರು ವರ್ಷಗಳ ಮಗು ಊಹೆ ಅನುಕರಣಗಳ ಮೂಲಕ ಸಾಮಾಜಿಕ ನಡವಳಿಕೆಯನ್ನು ಕಲಿಯುವುದು. ಈ ರೀತಿ ಆಟದ ಮೂಲಕ ಮಗು ತನ್ನ ಚತುರತೆಯನ್ನೂ ತಿಳಿವಳಿಕೆಯನ್ನೂ ಬೆಳೆಸಿಕೊಳ್ಳುವುದು. ಈ ಆಟವೇ ಕಲೆ ಮತ್ತು ವಿಜ್ಞಾನಗಳಿಗೆ ಜನ್ಮ ಕೊಟ್ಟಿರುವುದು. ಮಗು ನೋಡಿದುದನ್ನೆಲ್ಲಾ "ಇದು ಹೇಗೆ?"

" ಇದು ಏಕೆ ? " ಎಂದು ಪ್ರಶ್ನಿಸಿ ತಿಳಿಯಲು ಯತ್ನಿಸುವುದು. ಈ ಪ್ರಶ್ನೆಗಳು ಬೆಳೆದು ದೊಡ್ಡವರಾದಮೇಲೂ ತಲೆದೋರಿದರೆ ಅದರಿಂದ ವಿಜ್ಞಾನ ಹುಟ್ಟುವುದು.

ಮೂರು ನಾಲ್ಕು ವರ್ಷದ ಮಕ್ಕಳು ಮನೆಯಾಟ ಅಂಗಡಿಯಾಟ ಮುಂತಾದುವುಗಳನ್ನಾಡಿ ತಂದೆತಾಯಿಗಳ ಮತ್ತು ಇತರರ ವರ್ತನೆಯ ಮರ್ಮವನ್ನರಿಯುವರು. ನಟನೆಯ ಮೂಲಕ ತಾನೇ ತಾಯಿ ಯೆಂದು ತಿಳಿದು ತಾಯಿಯ ಯೋಚನೆಗಳನ್ನು, ತಾನೇ ಯೋಚಿಸು ವುದು. ಈ ಆಟದ ಮೂಲಕ ಇತರರ ಮನಸ್ಸನ್ನು ಅರಿಯುವ ಶಕ್ತಿಯನ್ನು ಬೆಳೆಸಿಕೊಳ್ಳುವುದು ಆದರೆ ಕಾಲಕ್ರಮೇಣ ಇತರರ ಮನಸ್ಸನ್ನು ಒಳಹೊಕ್ಕು ಅವರ ಯೋಚನೆಯನ್ನು ಆಶೆ ನಿರಾಶೆ ಗಳನ್ನು ಅರಿಯುವ ಶಕ್ತಿಯನ್ನು ಕಳೆದುಕೊಳ್ಳುವುದು. ಇದರಿಂದಲೇ ಸಮಾಜದಲ್ಲಿ ಪರಸ್ಪರ ತಪ್ಪು ತಿಳಿವಳಿಕೆಗಳೂ ಸಹಾನುಭೂತಿಯು ಅಭಾವವೂ ಉಂಟಾಗಿರುವುವು.

ಆದುದರಿಂದ ಮಗುವಿನ ಸತತವಾದ ಚಟುವಟಿಕೆಯು ಅದರ ಬೆಳೆವಣಿಗೆಗೆ ಬಹು ಮುಖ್ಯವಾದುದು. ಆಡಿ ಕೂಗಾಡುವ ಮಕ್ಕ ಳನ್ನು ' ಒಂದು ಕಡೆ ಕುಕ್ಕರಿಸು ' ಎಂದು ಗದರಿಸುವುದು ಮನುಷ್ಯ ಸ್ವಭಾವಕ್ಕೆ ವಿರುದ್ಧವೆಂದು ಸ್ಪಷ್ಟವಾಗುವುದು. ಮಕ್ಕಳಲ್ಲಿ ಸ್ವಭಾವ ಸಿದ್ಧವಾಗಿರುವ ಆಡುವ ಇಚ್ಛೆಯು ಅವರನ್ನು ತಿದ್ದಲು ಹಿರಿಯರಿಗೆ ದೊರೆತಿರುವ ಒಂದು ಸಾಧನ. ಇದನ್ನು ಉಪಯೋಗಿಸಿಕೊಂಡು ಮಕ್ಕ ಳನ್ನು ಯಾವ ರೀತಿಯಲ್ಲಿ ಬೇಕಾದರೆ ಆ ರೀತಿ ತಿದ್ದಿ ಬೆಳೆಸಬಹುದು.

### ಮೊದಲನೆಯ ವರ್ಷದಲ್ಲಿ

ಮೊದಲ ಎರಡು ತಿಂಗಳಲ್ಲಿ ಎಚ್ಚರಗೊಂಡಿದ್ದಾಗಲೆಲ್ಲಾ ಮಗು ವಸ್ತುಗಳನ್ನು ನೋಡುತ್ತಿರುವುದೇ ಅಲ್ಲದೆ, ಅವು ಚಲಿಸು ವಾಗ ತನ್ನ ನೋಟದಿಂದ ಹಿಂಬಾಲಿಸುವುದು. ಮನುಷ್ಯರನ್ನು

ಕಂಡು ಮುಗುಳ್ನಗೆ ನಗುವುದು. ಕೈಕಾಲುಗಳನ್ನು ಆಡಿಸುವುದು. ಮೂರು ತಿಂಗಳು ಕಳೆದನಂತರ ಕೈ ತೋಳುಗಳ ಮೇಲೆ ಹತೋಟಿಯು ಹೆಚ್ಚಾಗಿ ಆಟಿಕೆಯನ್ನು ಹಿಡಿಯಲು ಪ್ರಯತ್ನಿಸುವುದು. ಈ ವಯಸ್ಸಿನಲ್ಲಿ ಬಣ್ಣದ ಗಿಲಿಕೆಗಳು ತಕ್ಕ ಆಟಿಕೆಗಳು ಐದಾರು ತಿಂಗಳ ಮಗು ಕೈಯಲ್ಲಿ ಹಿಡಿದುದನ್ನು ಬಾಯಲ್ಲಿಡುವ ಆಟವನ್ನಾಡುವುದು. ಕೈಯಲ್ಲಿರುವ ವಸ್ತುವನ್ನು ಕೈಯಿಂದ ಕೈಗೆ ಬದಲಾಯಿಸಿ ಆಡಿಕೊಳ್ಳುವುದು ಮತ್ತು ಆಟಗೆಯನ್ನು ನೆಲದ ಮೇಲೆ ತಟ್ಟುವುದು. ಈ ವಯಸ್ಸಿನಲ್ಲಿ ಆಟಗೆಯು ಸುಲಭವಾಗಿ ಮಗು ತನ್ನ ಪುಟ್ಟ ಕೈಯಲ್ಲಿ ಹಿಡಿದುಕೊಳ್ಳುವ ಹಾಗಿರಬೇಕು. ಸೊಂಟದ ಮೇಲಿನ ಬಲವು ಹೆಚ್ಚಿ ತೊಡೆಯಮೇಲೆ ಕೂಡಿಸಿಕೊಂಡು “ದೂರಿ” ಆಡಿಸಿದರೆ ಆನಂದಪಡುವುದು. ಒಂದು ವರ್ಷ ವಯಸ್ಸಾದ ಮಗು ಶಬ್ದಗಳನ್ನು ಮಾಡುವ ಕುತೂಹಲದಿಂದ ಕೂಗಾಡುವುದು. ಕಾಲು ಸೊಂಟಗಳ ಮೇಲಿನ ಹತೋಟಿಯು ಹೆಚ್ಚಾಗಿ ಮನೆಯಲ್ಲೆಲ್ಲಾ ಅಂಬೆಗಾಲಿಟ್ಟು ಓಡಾಡುವುದು. ಚಿಕ್ಕ ಮರದ ತುಂಡುಗಳನ್ನು ಕೊಟ್ಟರೆ ಒಂದರಮೇಲೊಂದನ್ನಿಟ್ಟು ಎರಡು ಮೂರು ತುಂಡುಗಳಿಂದ ಗೋಪುರವನ್ನು ಕಟ್ಟಿ ಆನಂದಪಡುವುದು. ಈ ವಯಸ್ಸಿನಲ್ಲಿ ಚಲನೆಯ ಮೂಲಕ ಮಗು ಅತ್ಯಂತ ಸಂತೋಷಪಡುವುದು ಮತ್ತು ಹೊಸಕೆಲಸಗಳನ್ನು ಮಾಡಿ ಹೊಸ ಚಲನೆಯನ್ನು ಕಲಿತು ಹರ್ಷಿಸುವುದು. ಹೊಸದಾಗಿ ಒಂದು ಪದವನ್ನು ಕಲಿಯುವುದು, ಮೊದಲ ಬಾರಿಗೆ ಎದ್ದು ನಿಲ್ಲುವುದು, ಮುಂದಕ್ಕೆ ಒಂದು ಹೆಜ್ಜೆ ಇಡುವುದು, ಮರದ ತುಂಡೊಂದನ್ನು ಕೈಯಿಂದ ಎತ್ತಿಕೊಳ್ಳುವುದು—ಇವೆಲ್ಲವೂ ಮಗುವಿನ ಜೀವಮಾನದಲ್ಲಿ ಮಹತ್ತರವಾದ ಕಾರ್ಯಸಾಧನೆಗಳು. ಈ ವಯಸ್ಸಿನಲ್ಲಿಯೇ ಒಂದು ಗುರಿಯನ್ನು ಇಟ್ಟು ಕೆಲಸವನ್ನು ಸಾಧಿಸುವುದನ್ನು ಕಲಿಯುವುದು. ಹಿಡಿದ ಕೆಲಸವನ್ನು ಸಾಧಿಸಿದ

ನಂತರವೇ ಮತ್ತೊಂದು ಕೆಲಸಕ್ಕೆ ಕೈಹಾಕುವುದು. ಈ ಗುಣ ಮಾನವನಲ್ಲಿ ಎಷ್ಟು ಮುಖ್ಯವಾದುದು! ಆದರೂ ಬೇಸರಗೊಂಡ ಹಿರಿಯರು ಇದು ಹಟಮಾರಿತನವೆಂದು ಹೇಳಿ ಹಸುಳೆಯನ್ನು ಬೆದರಿಸುವರು. ಈ ವಯಸ್ಸಿನಲ್ಲಿ ಮತ್ತೊಂದು ಮುಖ್ಯ ಪರಿವರ್ತನೆ ಏನೆಂದರೆ ಹಿರಿಯರ ಜೊತೆಯಲ್ಲಿ ಸಂಪರ್ಕಹೊಂದಿ ಆಡುವುದೆಂದರೆ ಮಕ್ಕಳಿಗೆ ಬಹಳ ಇಷ್ಟ. ಆದುದರಿಂದ ತಾಯಿಯು ಹತ್ತಿರ ಕುಳಿತು ಮಾತಾಡಿಸದರೆ ಮಗುವಿಗೆ ತುಂಬ ಹಿತವಾಗಿರುವುದು. ಹಾಗಲ್ಲದೆ, ಮಗುವನ್ನು ಒಂದು ಕಡೆ ಮಲಗಿಸಿ ಹಾಲು ಕೊಡುವಾಗ, ಸ್ನಾನ ಮಾಡಿಸುವಾಗ ಮಾತ್ರ ಅದರ ಸಂಪರ್ಕವನ್ನು ಹೊಂದುವುದಾದರೆ ಮಗುವಿನ ಸಾಮಾಜಿಕ ಬೆಳವಣಿಗೆಗೆ ಕುಂದಕ ಬರುವದಲ್ಲದೆ ಮಗು ಒಂದೆರಡು ವರ್ಷ ವಯಸ್ಸಾದರೂ ನಾಲ್ಕಾರು ತಿಂಗಳಿನ ಮಗುವಿನ ಹಾಗೆ ಸುತ್ತ ಮುತ್ತಲಿನ ವಿಷಯಗಳಲ್ಲಿ ಶ್ರದ್ಧೆಯಿಲ್ಲದೆ ಬಾಯೊಳಗೆ ಬೆರಳಿಟ್ಟು ಚೀಪುತ್ತ ಕಾಲ ಕಳೆಯುವುದು.

## ಎರಡನೆಯ ವರ್ಷದಲ್ಲಿ

ಮೊದಲನೆಯ ವರ್ಷದಲ್ಲಿ ಕೈಯಲ್ಲಿ ಯಾವ ವಸ್ತು ಸಿಕ್ಕಿದರೂ ಅದನ್ನು ಬಾಯೊಳಗಿಡುವುದು, ನೆಲದಮೇಲೆ ಹೊಡೆಯುವುದು, ಕೆಳಗೆ ಎತ್ತಿ ಹಾಕುವುದು ಮುಂತಾದ ಆಟಗಳನ್ನು ಆಡುವುದು. ಆದರೆ ಎರಡನೆಯ ವರ್ಷದಲ್ಲಿ ವಸ್ತುವಿನ ಸ್ವರೂಪ ಗುಣಗಳನ್ನು ಅನ್ವಯಿಸಿ ಆಡುವುದಕ್ಕಾರಂಭಿಸುವುದು. ಒಂದು ಬಟ್ಟಲನ್ನೂ ಚಮಚವನ್ನೂ ಕೊಟ್ಟರೆ ಚಮಚವನ್ನು ಬಟ್ಟಲಿನ ಒಳಗೆ ಹೊಡೆದು ಶಬ್ದಮಾಡುವುದು. ಹದಿನೆಂಟು ತಿಂಗಳ ವಯಸ್ಸಿನಲ್ಲಿ ಕುರ್ಚಿಯನ್ನೂ ಮೆಟ್ಟಲನ್ನೂ ಹತ್ತಿ ಇಳಿದು ಆಡುವುದು. ಮೂರು ಚಕ್ರದ ಗಾಡಿಯು ಮಗುವಿನ ನಡಗೆ ಓಡಾಟಗಳಿಗೆ ಬಹಳ ಸಹಕಾರಿಯಾಗುವುದು. ಒಂದು ಚೆಂಡನ್ನು ತೆಗೆದು ಪೆಟ್ಟಿಗೆಯ ಒಳಗೆ ಹಾಕು

ವುದು. ಮರದ ತುಂಡುಗಳನ್ನು ಕಂಡರೆ ಒಂದರಮೇಲೊಂದನ್ನಿಟ್ಟು ಗೋಪುರ ಕಟ್ಟುವುದು. ಸೀಮೆಸುಣ್ಣವನ್ನು ತೆಗೆದುಕೊಂಡು ಹಲಗೆಯ ಮೇಲೆ ಇಲ್ಲವೆ ನೆಲದ ಮೇಲೆ ಗೀಚುವುದು. ಸೀಸದ ಕಡ್ಡಿಯನ್ನು ಹಿಡಿದು ಕಾಗದದ ಮೇಲೆ ಗೀರು ಹಾಕಿ ಆನಂದಿಸುವುದು ಈ ವಯಸ್ಸಿನಲ್ಲಿ ಕಣ್ಣು ಮೂಗು ಇದನ್ನೆಲ್ಲಾ ಕೇಳಿದರೆ ತೋರಿಸುವುದು. ಎರಡು ವರ್ಷದ ಮಗು ಆರು ಮರದ ತುಂಡುಗಳನ್ನು ಪಯೋಗಿಸಿ ಗೋಪುರವನ್ನು ಕಟ್ಟಬಲ್ಲುದು. ಮರದ ತುಂಡುಗಳನ್ನು ಒಂದರ ಪಕ್ಕದಲ್ಲೊಂದನ್ನು ಜೋಡಿಸಿ "ರೈಲು" ಮಾಡುವುದು. ಈ ವಯಸ್ಸಿನಲ್ಲಿ ಮರಳಿನಲ್ಲಿ ಬಹಳ ಆನಂದದಿಂದ ಆಡುವುದು. ತೆಂಗಿನ ಚಿಪ್ಪು ಅಥವಾ ಲೋಟವನ್ನು ತೆಗೆದುಕೊಂಡು ಮರಳನ್ನು ತುಂಬುವುದು, ಸುರಿಯುವುದು. ಪೆಟ್ಟಿಗೆ ಅಥವಾ ತಗಡಿನ ಡಬ್ಬದ ಮುಚ್ಚಳವನ್ನು ಹಾಕುವುದು ತೆಗೆಯುವುದು ಎಂದರೆ ಬಹಳ ಇಷ್ಟ.

ಈ ಆಟಗಳೆಲ್ಲಾ ಮಗುವಿನ ಬೆಳವಣಿಗೆಯಲ್ಲಿ ಒಂದು ಹೊಸ ಮಟ್ಟವನ್ನು ಸೂಚಿಸುವುವು. ಸಾಮಾನ್ಯವಾಗಿ ಹದಿನೆಂಟು ತಿಂಗಳ ವಯಸ್ಸಿನ ವರೆಗೂ ಆಟದ ಸಾಮಾನುಗಳನ್ನು ಕೈಗೆ ತೆಗೆದುಕೊಳ್ಳುವುದು, ಕೆಳಗೆ ಹಾಕುವುದು, ನೆಲದಮೇಲೆ ಬಡಿದು ಸದ್ದು ಮಾಡುವುದು, ಮುಂತಾದ ಕೆಲಸಗಳನ್ನು ಮಾತ್ರ ಮಾಡುತ್ತಿರುತ್ತದೆ. ಆದರೆ ಹದಿನೆಂಟು ತಿಂಗಳನ್ನು ದಾಟಿದಮೇಲೆ ಆಟದ ಸಾಮಾನುಗಳ ಮೂಲಕ ಒಂದು ಹೊಸದನ್ನು ನಿರ್ಮಿಸಿ ಆನಂದಿಸುವುದು. ಎರಡು ಮೂರು ಮರದ ತುಂಡುಗಳನ್ನು ಒಂದರ ಮೇಲೆ ಒಂದನ್ನು ಇಟ್ಟು ಬಹಳ ಆನಂದವನ್ನು ಪಡೆಯುವುದು. ಗೋಪುರವನ್ನು ನಿರ್ಮಾಣ ಮಾಡುವುದು ಒಂದು ಗುರಿಯಾಗಿ, ಅದನ್ನು ಸಾಧಿಸಿ, ಕಟ್ಟಿದನಂತರ ಸಂತೋಷಪಡುವುದು. ಹೀಗೆ ಗುರಿ, ಸಾಧನೆ, ಫಲಿತಾಂಶಗಳ ಅರಿವು ಇವೆಲ್ಲವೂ ತಲೆದೋರುವುವು. ಇನ್ನು ಮೇಲೆ ಮಗುವಿಗೆ

ತನ್ನ ಆಟವು ಬರಿಯ ಆಟವಲ್ಲ, ಗುರಿಯನ್ನು ಸಾಧಿಸುವ ಕಾರ್ಯ. ಸಾಮಾನುಗಳ ಮೂಲಕ ಹೊಸದನ್ನು ನಿರ್ಮಿಸುವುದೊಂದೇ ಅಲ್ಲದೆ ಅದಕ್ಕೆ ಹೆಸರು ಕೊಡಲು ಉಪಕ್ರಮಿಸುವುದು. ಮರಳನ್ನು ಗುಡ್ಡೆ ಹಾಕಿ ಬೆಟ್ಟವೆನ್ನುವುದು, ನಾಲ್ಕಾರು ಮರದ ತುಂಡುಗಳನ್ನು ಚೌಕ ವಾಗಿ ಜೋಡಿಸಿ ಮನೆಯೆನ್ನುವುದು. ಬೆಳೆಯುತ್ತ ಬೆಳೆಯುತ್ತ ಇಂತಹ ಆಟಗಳು ಹೆಚ್ಚಿ ನಾಲ್ಕೈದು ವರ್ಷದ ಮಗು ತಾನು ನೋಡುವ ಅನೇಕ ವಸ್ತುಗಳನ್ನು ಆಟದಲ್ಲಿ ಮಾಡುವುದು.

ಈ ಹೊಸ ಶಕ್ತಿಯು ಮುಂದುವರಿಯುವ ಹಾಗೆ ಒಂದೂವರೆ ವರ್ಷ ಎರಡು ವರ್ಷದ ಮಕ್ಕಳಿಗೆ ಮುಖ್ಯವಾಗಿ ಕೊಡಬೇಕಾದುದು ಮರದ ಅಥವಾ ಗಾಜಿನ ಗೊಂಬೆಗಳಲ್ಲ ; ಬಲೂನು, ಮೋಟರುಗಳಲ್ಲ. ಹೊಸದನ್ನು ನಿರ್ಮಿಸಲು ಸಾಧಕವಾದ ಪುಟ್ಟ ಪುಟ್ಟ ವಸ್ತುಗಳು. ಒಂದೂವರೆ ಎರಡಂಗುಲದ ಮರದ ತುಂಡುಗಳು, ದಪ್ಪನಾಗಿರುವ ಬಣ್ಣದ ಮಣಿಗಳು, ಒಂದಡಿ ಉದ್ದದ ನಯವಾದ ಕೋಲುಗಳು, ಮರದ ಬಳೆಗಳು, ಮರದ ಅಡಕ ಪೆಟ್ಟಿಗೆಗಳು ( ಒಂದನ್ನು ಮತ್ತೊಂದರೊಳಗೆ ಇಡಬಹುದಾದಂಥವು ) ಮುಚ್ಚಳವಿರುವ ಪೆಟ್ಟಿಗೆ ಗಳು ಮತ್ತು ಡಬ್ಬಿಗಳು ಇಂತಹ ಪದಾರ್ಥಗಳು ಈ ವಯಸ್ಸಿನಲ್ಲಿ ಮಗುವಿನ ಆಟಕ್ಕೆ ಅತ್ಯಗತ್ಯವಾಗಿ ಬೇಕಾದುವು. ಇವುಗಳನ್ನು ಕೊಟ್ಟರೆ ಮಗು ಸಂತೋಷವಾಗಿ ಆಡಿಕೊಳ್ಳುವುದೇ ಅಲ್ಲದೆ ಅದರ ದೈಹಿಕ ಮತ್ತು ಮಾನಸಿಕ ಬೆಳವಣಿಗೆಯೂ ಮುಂದುವರಿಯುವುದು. ಮಗುವಿಗೆ ಆಟದ ಸಾಮಾನುಗಳನ್ನು ಒದಗಿಸುವಾಗ ಮುಖ್ಯವಾದುದು ಹಣವಲ್ಲ. ಮಗುವಿನ ಬೆಳವಣಿಗೆಯ ಮಟ್ಟಕ್ಕೆ ಅನುಸರಿಸಿ ಸಾಮಾನುಗಳನ್ನು ತೆಗೆಯುವ ತಿಳಿವಳಿಕೆ. ಬೆಳವಣಿಗೆಗೆ ತಕ್ಕ ಪದಾರ್ಥಗಳನ್ನು ಮಗುವಿಗೆ ಒದಗಿಸಿಕೊಟ್ಟರೆ ದೊಡ್ಡವರ ಹವ್ಯಾಸವಿಲ್ಲದೆ ತಮ್ಮಿಷ್ಟಕ್ಕೆ ತಾವು ಆಡಿಕೊಳ್ಳುವುವು.

## ಮೂರನೆಯ ವರ್ಷದಿಂದ ಆರನೆಯ ವರ್ಷದ ವರೆಗೆ

ಮೊದಲನೆಯ ಭಾಗದಲ್ಲಿ ನೋಡಿರುವ ಹಾಗೆ ಮಗು ಬೆಳೆಯುತ್ತ ಬೆಳೆಯುತ್ತ ವಿಕಾಸಹೊಂದಿ ಹೊಸ ಹೊಸ ಶಕ್ತಿ ಸಾಮರ್ಥ್ಯಗಳನ್ನು ಪಡೆಯುವುದು. ಅದರ ಆಟವು ಈ ಶಕ್ತಿ ಸಾಮರ್ಥ್ಯಗಳನ್ನು ಅನುಸರಿಸಿ ಮುಂದುವರಿಯುವುದು. ಇದನ್ನು ತಿಳಿದು ಅದಕ್ಕೆ ತಕ್ಕ ಸಾಮಾನುಗಳನ್ನು ಒದಗಿಸಿಕೊಡುವುದು ತಂದೆ ತಾಯಿಗಳ ಮುಖ್ಯ ಕರ್ತವ್ಯ.

ಮೂರನೆಯ ವರ್ಷದಿಂದ ಹಿಡಿದು ಆರನೆಯ ವರ್ಷದ ವರೆಗೆ ಮಗುವಿಗೆ ಬೇಕಾದ ಆಟದ ವಸ್ತುಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು.

(೧) ದೈಹಿಕ ಬೆಳೆವಣಿಗೆಗೆ ಆವಶ್ಯಕವಾದುವು—ಎರಡು ಮೂರು ವರ್ಷ ವಯಸ್ಸಿನ ಮಕ್ಕಳಿಗೆ ಹತ್ತಿ ಇಳಿಯುವುದೆಂದರೆ ಬಹಳ ಇಷ್ಟ. ಇದಕ್ಕಾಗಿ ಮೆಟ್ಟಲುಗಳಿಂದ ಕೂಡಿದ ಜಾರುಗುಪ್ಪೆಯು ಬಹಳ ಒಳ್ಳೆಯ ಆಟದ ವಸ್ತು, ಆದರೆ ಒಬ್ಬೊಬ್ಬರೂ ತಮ್ಮ ಮನೆಗಳಲ್ಲಿ ಜಾರುಗುಪ್ಪೆಗಳನ್ನು ಕಟ್ಟಲು ಸಾಧ್ಯವಿಲ್ಲ. ಇದಕ್ಕೆ ಬದಲಾಗಿ ಈ ವಯಸ್ಸಿನ ಮಕ್ಕಳಿಗೆ ಎರಡು ಮೂರಡಿ ಎತ್ತರವಿರುವ ಒಂದು ಮರದ ಪೆಟ್ಟಿಗೆಯನ್ನಿಟ್ಟು ಅದಕ್ಕೆ ಒಂದಡಿ ಅಗಲ ಮೂರು ನಾಲ್ಕಡಿ ಉದ್ದವಿರುವ ಹಲಗೆಯನ್ನು ಜೋಡಿಸಿದರೆ ಮಗು ಅದರ ಮೇಲೆ ಹತ್ತಿ ಜಾರಿ ಆಡಿಕೊಂಡು ಆನಂದಪಡುವುದು. ಪುಟ್ಟ ಏಣಿಯೊಂದನ್ನು ಕೊಡಬಹುದು. ಅಂಗಳದಲ್ಲಿರುವ ಪುಟ್ಟ ಮರಗಳನ್ನು ಹತ್ತಬೇಕೆಂದು ಮಗು ಪ್ರಯತ್ನಿಸುವುದು. ಸ್ವಲ್ಪ ಎತ್ತರದಲ್ಲಿಯೇ ಬಲವಾದ ಕೊಂಬೆಗಳನ್ನುಳ್ಳ ಹೊಂಗೆ ಮುಂತಾದ ಮರಗಳು ಮಕ್ಕಳ ಆಟಕ್ಕೆ ಬಹಳ ಅನುಕೂಲವಾಗುವುವು. ಅಂಗಳದಲ್ಲಿರುವ ಮರಕ್ಕೆ ಹಗ್ಗವನ್ನು ಕಟ್ಟಿ ಉಯ್ಯಾಲೆ ಮಾಡಿ ಆಡುವುದೂ ಮಗುವಿಗೆ ಪ್ರಿಯ

ವಾದ ಆಟ. "ಏತದ ಹಲಗೆ" ಆಟವು ಮಕ್ಕಳಿಗೆ ಜಗ್ಗಿ ಕುಣಿಯುವ ಆಟಕ್ಕೆ ಸಹಕಾರಿಯಾಗುವುದು. ಮೂರು ನಾಲ್ಕು ವರ್ಷದ ಮಕ್ಕಳಿಗೆ ಚೆಂಡುಗಳನ್ನು ಒದೆಯುವುದು ಎಸೆಯುವುದೆಂದರೆ ಬಹಳ ಇಷ್ಟ. ಇನ್ನೂ ಸ್ವಲ್ಪ ದೊಡ್ಡ ಮಕ್ಕಳಿಗೆ ದಾಂಡಿನಿಂದ ಚೆಂಡನ್ನು ಹೊಡೆಯುವ ಸಾಮರ್ಥ್ಯವು ಬರುವುದು. ಈ ವಯಸ್ಸಿನ ಮಕ್ಕಳು "ಹಗ್ಗದ ಕುಣಿತದ" ಆಟವನ್ನು ವಿಶೇಷವಾಗಿ ಪ್ರೀತಿಸುವರು. ಕಬ್ಬಿಣದ ಗಾಲಿಯನ್ನು ಓಡಿಸುವುದು ಮತ್ತೊಂದು ಪ್ರಿಯವಾದ ಆಟ. ಇಂತಹ ಸಾಮಾನುಗಳನ್ನು ಒದಗಿಸಿಕೊಟ್ಟರೆ ಮಗು ಸ್ವೇಚ್ಛೆಯಾಗಿ ಆಡಿ ತನ್ನ ದೇಹದ ಅಂಗಗಳನ್ನು ಬಲಪಡಿಸಿಕೊಂಡು ಪಳಗಿಸಿಕೊಳ್ಳುವುದು. ಒಳ್ಳೆಯ ದೇಹಶಕ್ತಿಯನ್ನು ಸಂಪಾದಿಸುವುದೊಂದೇ ಅಲ್ಲದೆ ಇಷ್ಟಾನುಸಾರವಾಗಿ ಆಡಿ ಉಲ್ಲಾಸದಿಂದ ಬಾಳುವುದು.

(೨) ನಿರ್ಮಾಣ ಸಾಧಕ ವಸ್ತುಗಳು—ಮೇಲೆ ನೋಡಿದ ಹಾಗೆ ಬೇರೆ ಬೇರೆ ವಸ್ತುಗಳನ್ನು ತೆಗೆದುಕೊಂಡು ಒಂದು ಹೊಸ ವಸ್ತುವನ್ನು ಅಥವಾ ಆಕೃತಿಯನ್ನು ನಿರ್ಮಿಸುವುದು ಮಗುವಿಗೆ ಈ ವಯಸ್ಸಿನಲ್ಲಿ ಬಹಳ ಇಷ್ಟವಾದ ಕೆಲಸ. ಆದುದರಿಂದ ಒಂದು ಹೊಸ ವಸ್ತುವನ್ನು ಅಥವಾ ಹೊಸ ಆಕೃತಿಯನ್ನು ನಿರ್ಮಿಸಲು ಸಾಧ್ಯವಾದ ಸಾಮಾನುಗಳನ್ನು ಆಡಲು ಕೊಡಬೇಕು. ನಾನಾ ಆಕಾರಗಳುಳ್ಳ ಮರದ ತುಂಡುಗಳು ಇಂತಹ ಆಟಕ್ಕೆ ಬಹಳ ಸಹಕಾರಿಯಾದುವು. ಈ ಮರದ ತುಂಡುಗಳ ಮೂಲಕ ಮನೆ, ಗೋಪುರ, ಸೇತುವೆ, ರೈಲು, ಗಾಡಿ ಮುಂತಾದುವುಗಳನ್ನೆಲ್ಲಾ ರಚಿಸಿ ಹೆಸರು ಕಟ್ಟಿ ಅತ್ಯಂತ ಸಂತೋಷವನ್ನು ಮಗು ಪಡೆಯುವುದು. ಗಾಜಿನ ಮಣಿ, ಮರದ ಮಣಿ, ಮುರಿದ ಬಳೆ ಚೂರುಗಳು, ಹುಣಿಸೆ ಬೀಜ ಬಣ್ಣಬಣ್ಣದ ಕಲ್ಲಿನ ಹರಳುಗಳು ಇತ್ಯಾದಿಗಳು ಹೊಸ ಹೊಸ

ಆಕೃತಿಗಳನ್ನು ರಚಿಸಲು ಅನುಕೂಲವಾಗಿವೆ. ಗೀಚುವುದು, ಚಿತ್ರ ಬರೆಯುವುದೆಂದರೆ ಮಗುವಿಗೆ ಬಹಳ ಪ್ರಿಯವಾದ ಕೆಲಸ. ಆದುದರಿಂದ ಒಂದು ಮರದ ದೊಡ್ಡ ಕಪ್ಪು ಹಲಗೆಯನ್ನೂ ನಾನಾ ಬಣ್ಣದ ಸೀಮೆಸುಣ್ಣವನ್ನೂ ಕೊಟ್ಟರೆ ಯಥೇಚ್ಛವಾಗಿ ಗೀಚಿ "ಚಿತ್ರ"ಗಳನ್ನು ಬರೆಯುವುದು. ಬಿಳಿ ಕಾಗದ ಸೀಸದ ಕಡ್ಡಿಗಳನ್ನು ಕೊಟ್ಟರೆ ಕಾಗದದ ಮೇಲೆ ಸಿಕ್ಕಾಬಟ್ಟೆ ಗೀಚುವುದು. ಬಣ್ಣ ಮತ್ತು ಕುಂಚಗಳನ್ನು ಕೊಟ್ಟರೆ ಅವುಗಳಿಂದ ಕಾಗದದ ಮೇಲೆ ಚಿತ್ರಗಳನ್ನು ಬರೆಯುವುದು. ಈ ಆಟದ ಮೂಲಕ ಹೆಬ್ಬೆರಳು ಮೊದಲ ಬೆರಳುಗಳ ಮೇಲೆ ಹತೋಟಿಯನ್ನು ಪಡೆದು ಮುಂದೆ ಬರೆಯುವುದನ್ನು ಸುಲಭವಾಗಿ ಕಲಿಯುವುದು. ಕಾಗದಗಳನ್ನು ಹರಿಯುವುದು ಕತ್ತರಿಸುವುದೆಂದರೆ ಮಗುವಿಗೆ ಬಹಳ ಇಷ್ಟ. ಇದಕ್ಕಾಗಿಯೇ ಪ್ರತ್ಯೇಕವಾಗಿ ಮಗುವಿಗೆ ಕಾಗದ ಕತ್ತರಿಗಳನ್ನು ಒದಗಿಸಿಕೊಟ್ಟರೆ ನಾನಾ ಆಕೃತಿಗಳನ್ನು ಕತ್ತರಿಸಿ ಕೈಚತುರತೆಯನ್ನು ಹೆಚ್ಚಿಸಿಕೊಳ್ಳುವುದು. ಜೊತೆಯಲ್ಲಿಯೇ ಚಿತ್ರಪುಸ್ತಕಗಳನ್ನು ಕೊಟ್ಟರೆ ಆ ಚಿತ್ರಗಳನ್ನು ಸರಿಯಾಗಿ ಕತ್ತರಿಸಿ ಮತ್ತೊಂದು ಪುಸ್ತಕದಲ್ಲಿ ಅಂಟಿಸಿಕೊಳ್ಳುವುದು. ಹೀಗೆ ಕೈಚತುರತೆಯನ್ನು ಕಲಿತುಕೊಳ್ಳುವುದೇ ಅಲ್ಲದೆ ಸೌಂದರ್ಯಾನುಭವವೂ ಮುಂದುವರಿಯುವುದು.

ಮಣಿಗಳನ್ನೂ ದಾರವನ್ನೂ ಕೊಟ್ಟರೆ ಮಗು ಮಣಿಗಳನ್ನು ದಾರದಲ್ಲಿ ಪೋಣಿಸಿ ಮಾಲೆ ಮಾಡುವುದು. ಈ ಮಾಲೆ ಪೋಣಿಸುವುದರಲ್ಲಿ ವಿಧವಿಧವಾದ ಬಣ್ಣಗಳ ಹೆಸರುಗಳನ್ನು ತಿಳಿಯುವುದೇ ಅಲ್ಲದೆ ಅವುಗಳ ಜೋಡಣೆಯ ಕ್ರಮವನ್ನು ಅರಿಯುವುದು ಮತ್ತು ಲೆಕ್ಕ ಮಾಡುವುದನ್ನು ಕಲಿಯುವುದು. ರಟ್ಟಿನಲ್ಲಾಗಲಿ, ಮರದ ಹಲಗೆಯಲ್ಲಾಗಲಿ ಸಾಲಿಗೆ ತೂತು ಕೊರೆದು ಒಂದು ದಾರವನ್ನು ಕೊಟ್ಟರೆ, ದಾರವನ್ನು ಆ ಹಲಗೆ ಅಥವಾ ರಟ್ಟಿನ ತೂತುಗಳಲ್ಲಿ

ತೂರಿಸಿ 'ಹೊಲೆ' ಯುವುದನ್ನು ಕಲಿಯುವುದು. ಈ ಎರಡು ಕೆಲಸಗಳೂ ಕೈಬೆರಳು ಮತ್ತು ಕಣ್ಣಿನ ಸಹಕರಣೆ ಮುಂದುವರಿಯಲು ಸಹಾಯಕವಾಗುತ್ತವೆ. ಇದು ಪಾಠಶಾಲೆಗೆ ಹೋಗಿ ಬರೆಯುವುದನ್ನು ಕಲಿಯಲು ಅನುಕೂಲವಾಗುವುದು.

ಮಕ್ಕಳಿಗೆ ಬಹಳ ಇಷ್ಟವಾದ ಮತ್ತೊಂದು ಗುಂಪಿನ ಆಟಗಳೆಂದರೆ— ಮರಳಾಟ, ಮಣ್ಣಿನಾಟ. ಮರಳು, ತಗಡಿನ ಡಬ್ಬಗಳು, ಸ್ವಲ್ಪ ನೀರು ಇವುಗಳ ಮೂಲಕ ಮಕ್ಕಳು ನಾನಾ ವಿಧವಾದ ಆಟಗಳನ್ನಾಡುವರು. ಸ್ವಲ್ಪ ನೀರು, ಜೇಡಿಮಣ್ಣನ್ನು ಕೊಟ್ಟರೆ ನಾನಾ ಆಕಾರದ ಪದಾರ್ಥಗಳನ್ನು ಮಾಡುವುವು. ಈ ಆಟಗಳಲ್ಲಿ ಮಕ್ಕಳ ಬಟ್ಟೆಗಳು ಸ್ವಲ್ಪ ಒದ್ದೆಯಾಗಿ ಕೊಳಕಾಗಬಹುದು. ಆದರೆ ಇದರಿಂದ ಬಟ್ಟೆಗಳನ್ನು ಸ್ವಲ್ಪ ಹೆಚ್ಚಾಗಿ ಒಗೆಯುವ ಸಂಭವವು ಉಂಟಾಗುವುದೇ ಹೊರತು ಮತ್ಯಾವ ಅನಾಹುತವೂ ಆಗುವುದಿಲ್ಲ. ತಂದೆ ತಾಯಿಗಳು ಮುಖ್ಯವಾಗಿ ಗಮನದಲ್ಲಿಡಬೇಕಾದ ಅಂಶವೇನೆಂದರೆ ಯಾವ ಆಟವನ್ನೇ ಆಗಲಿ ಮಗು ನಾಲ್ಕಾರು ನಿಮಿಷಗಳಿಗಿಂತ ಹೆಚ್ಚಾಗಿ ಆಡುವುದಿಲ್ಲ. ಆಟಬೇಡವೆಂದು ಹೇಳಿ ತಡೆದರೆ ಹಟ ಹಿಡಿದು ದೀರ್ಘಕಾಲ ಆಡುತ್ತಿರುವುದು. ಆ ಸಮಯದಲ್ಲಿ ಮಗು ವಿಷ ಇಚ್ಛೆ ಆಡಿಕೊಳ್ಳುವುದಲ್ಲ—ತಂದೆ ತಾಯಿಗಳು ತನ್ನ ಆಟಕ್ಕೆ ಅಡ್ಡಿ ಬರುವುದರಿಂದ ಅತೃಪ್ತಿಗೊಂಡು ಹಟಮಾರಿತನವನ್ನು ಹೊರಪಡಿಸುವುದು. ಸಣ್ಣ ಸಣ್ಣ ಗಾಡಿ ಗುದ್ದಲಿ ಪಿಕಾಸಿ ಇವುಗಳನ್ನು ಕೊಟ್ಟರೆ ಮಗು ಅಂಗಳದಲ್ಲಿ 'ತೋಟದ ಕೆಲಸವನ್ನು' ಬಹಳ ಶ್ರದ್ಧೆಯಿಂದ ಮಾಡತೊಡಗುವುದು. ಸ್ವಲ್ಪ ಬೆಳೆದ ಮೇಲೆ ತೋಟದ ಕೆಲಸಕ್ಕೆ ಎಷ್ಟೋ ಸಹಾಯಮಾಡುವುದು.

(೩) ಅನುಕರಣದ ಆಟಗೆಗಳು—ಮಕ್ಕಳು ತಂದೆ ತಾಯಿಗಳು ಮಾಡುವ ಕೆಲಸಗಳನ್ನು ಆಟದ ಮೂಲಕ ಅನುಕರಿಸಬೇಕೆಂದು

ಇಚ್ಛಿಸುವುವು. ಇಂತಹ ಆಟಗಳಿಗೆ ಬೇಕಾಗುವ ಉಪಕರಣಗಳೇ ಬೊಂಬೆಗಳು. ಬೊಂಬೆಗೆ ಬಟ್ಟೆಹಾಕುವುದು, ಸ್ನಾನಮಾಡಿಸುವುದು, ಹಾಲು ಕುಡಿಸುವುದು ಮುಂತಾದ ಆಟಗಳ ಮೂಲಕ ತಾಯಿಯ ಕೆಲಸಗಳನ್ನು ಅನುಕರಿಸುವುದು. ಹೀಗೇ ಚನ್ನಪಟ್ಟಣದ ಬಣ್ಣದ ಸಾಮಾನುಗಳ ಮೂಲಕ ಅಡಿಗೆ ಮಾಡುವುದು, ಬೀಸುವುದು ಮುಂತಾದ ಮನೆಗೆಲಸಗಳನ್ನು ಅನುಕರಿಸುವುದು. ಸಣ್ಣ ಪುಟ್ಟ ಕುರ್ಚಿ, ಮೇಜು, ಮಂಚ ಇವುಗಳನ್ನು ಪಯೋಗಿಸಿ ಮನೆ ಆಟವನ್ನಾಡುವುದು, ರೈಲುಗಾಡಿ, ಮೋಟಾರು, ವಿಮಾನ, ಆನೆ, ಕುದುರೆ ಈ ಬೊಂಬೆಗಳ ಮೂಲಕ ಸುತ್ತಮುತ್ತಲಿನ ಜನಗಳು ಮಾಡುವ ಕೆಲಸಗಳನ್ನು ಅನುಕರಿಸುವುದು. ನಮ್ಮ ದೇಶದಲ್ಲಿ ಮಕ್ಕಳು ಈ ಆಟಗಳನ್ನೇ ಹೆಚ್ಚಾಗಿ ಆಡುವರು. ಆದುದರಿಂದಲೇ ಈ ಆಟದ ಸಾಮಾನುಗಳು ಮಾತ್ರವೇ ಅಂಗಡಿಗಳಲ್ಲಿ ದೊರೆಯುವುವು. ಈ ಆಟಿಕೆಗಳು ಮಾತ್ರ ಅಂಗಡಿಗಳಲ್ಲಿ ದೊರೆಯುವುದರಿಂದ ಅವುಗಳನ್ನೇ ಮಕ್ಕಳಿಗೆ ತಂದೆ ತಾಯಿಗಳು ಕೊಂಡುಕೊಡುವರು. ಆದರಿಂದಲೇ ಮಕ್ಕಳು ಆ ಆಟಗಳನ್ನೇ ಆಡುವರು. ಹೀಗೆ ಮಕ್ಕಳ ಆಟವು ಒಂದು ಚಕ್ರದಲ್ಲಿ ಸಿಕ್ಕಿಬಿಟ್ಟಿದೆ. ತಂದೆ ತಾಯಿಗಳೂ, ಆಟಿಕೆಗಳನ್ನು ತಯಾರಿಸುವವರೂ ಹೊಸದಾಗಿ ಯೋಚನೆಮಾಡಿ ಹೆಚ್ಚು ಫಲಕಾರಿಯಾದ ಆಟಿಕೆಗಳನ್ನು ತಯಾರುಮಾಡುವ ಹಾಗೆ ಮಾಡಬೇಕು.

(೪) ಶಿಕ್ಷಣದ ಆಟಿಕೆಗಳು—ಕೆಲವು ಆಟಿಕೆಗಳು ಮಗುವಿನ ಶಿಕ್ಷಣಕ್ಕೋಸ್ಕರ ತಯಾರಿಸಲಾಗಿವೆ. ಲೆಕ್ಕ ಕಲಿಯುವುದಕ್ಕೋಸ್ಕರ 'ಮಣಿ ಪಟ' ಗಳನ್ನು ತಯಾರಿಸಲಾಗಿದೆ. ಆಕೃತಿ ಜ್ಞಾನವುಂಟಾಗುವುದಕ್ಕೋಸ್ಕರ 'ಆಕೃತಿಮಣೆ' (ಫಾರಂ ಬೋರ್ಡ್)ಗಳನ್ನು ಮಾಡಿರುವರು. ಈ ಮಣೆಗಳಲ್ಲಿ ಚೌಕ, ತ್ರಿಕೋಣ, ವೃತ್ತ,

ಅರ್ಧವೃತ್ತ ಮುಂತಾದ ಆಕಾರಗಳನ್ನು ಕೆತ್ತಿರುವರು. ಹೀಗೆಯೇ ನಾನಾ ಆಕಾರದ ಮರದ ತುಂಡುಗಳನ್ನು ಮಾಡಿರುವರು. ಉದ್ದ, ಅಗಲ, ಎತ್ತರ ಮುಂತಾದ ತಿಳಿವಳಿಕೆಯು ಬರಲು ಅಡಕದ ಪೆಟ್ಟಿಗೆ ಗಳನ್ನು ತಯಾರಿಸಿರುವರು. ಬೇರೆ ಬೇರೆ ಉದ್ದದ ಕಡ್ಡಿಗಳನ್ನು ಮಾಡಿರುವರು. ಈ ಆಟಿಕೆಗಳ ಮೂಲಕ ಮಗುವಿನ ಜ್ಞಾನವು ಮುಂದುವರಿಯುವುದು ಇಂತಹ ಆಟದ ಸಾಮಾನುಗಳು ನಮ್ಮ ದೇಶದ ಸಾಮಾನಿನ ಅಂಗಡಿಗಳಲ್ಲಿ ದೊರಕದಿರುವುದು ವಿಷಾದಕರ ವಾದ ವಿಷಯವಾಗಿದೆ.

ಮೇಲೆ ಹೇಳಿದ ಆಟಗಳು ಮಗುವಿನ ಬೆಳೆವಣಿಗೆಯನ್ನು ಅನುಸರಿಸಿ ಮುಂದುವರಿಯುವ ಆಟಗಳು. ಇಂತಹ ಸಲಕರಣೆ ಗಳನ್ನು ಮಕ್ಕಳಿಗೆ ಒದಗಿಸಿದರೆ ಅವರು ಸ್ವೇಚ್ಛೆಯಾಗಿ ಆಡುವು ದೊಂದೇ ಅಲ್ಲದೆ ಅವುಗಳ ಮೂಲಕ ಅವರ ದೈಹಿಕ ಮಾನಸಿಕ ಬೆಳೆ ವಣಿಗೆಗಳು ಮುಂದುವರಿಯಲು ಅನುಕೂಲವಾಗುವುದು. ಹೊಸ ಪದಾರ್ಥಗಳನ್ನು ನಿರ್ಮಿಸಿ ಅತ್ಯಂತ ಆನಂದವನ್ನು ಪಡೆಯು ವರು. ಈ ನಿರ್ಮಾಣಶಕ್ತಿಯು ಮಗು ಬೆಳೆದರೂ ಸ್ಥಿರವಾಗಿ ನಿಂತು ಸಮಾಜದ ಸಂಸ್ಕೃತಿಯು ಬೆಳೆಯಲು ಕಾರಣವಾಗುವುದು.

ಮುಖ್ಯವಾಗಿ ಎರಡನೆಯ ವರ್ಷದಿಂದ ಮಗು ಆಟದ ಮೂಲಕ ಕಾರ್ಯಸಾಧನೆಯ ಮನೋಭಾವವನ್ನು ಪಡೆಯುವುದು ಆವರಣದಲ್ಲಿರುವ ಸಾಮಾನುಗಳ ಮೂಲಕ ಒಂದು ಗುರಿಯನ್ನು ಸಾಧಿಸಲು ಮನಸ್ಸುಮಾಡಿ ಅದನ್ನು ಸಾಧಿಸುವ ವರೆಗೂ ಪ್ರಯತ್ನ ಪಟ್ಟು ಅದು ಪೂರ್ತಿಯಾದ ಮೇಲೆ ಆನಂದವನ್ನು ಹೊಂದುವುದು. ಮಕ್ಕಳಿಗೆ ಆಡಿಕೊಳ್ಳಲು ಸರಿಯಾದ ಸಾಮಾನುಗಳು ದೊರೆಯ ದಿದ್ದರೆ ಈ ಮನೋಭಾವವು ಮೊಟಕಾಗುವುದು. ಮಕ್ಕಳ ಬುದ್ಧಿ ಶಕ್ತಿಯ ಪರೀಕ್ಷಣದಿಂದ ಈ ಅಭಿಪ್ರಾಯವು ಸ್ಥಿರಪಟ್ಟಿದೆ. ಅತಿ

ಬಡವರ ಮನೆಗಳಲ್ಲಿ ಮಕ್ಕಳಿಗೆ ಆಡಿಕೊಳ್ಳಲು ಯಾವ ವಿಧವಾದ ಸಲಕರಣೆಗಳೂ ಇರುವುದಿಲ್ಲ ಬಹಳ ಧನಿಕರಾದವರ ಮನೆಗಳಲ್ಲಿ ಮಕ್ಕಳಿಗೆ ಆಡಿಕೊಳ್ಳಲು ಬೇಕಾದಷ್ಟು ಸಾಮಾನುಗಳಿದ್ದರೂ ಅವರನ್ನು ನೋಡಿಕೊಳ್ಳುವವರು ಹೆಚ್ಚಾಗಿರುವುದರಿಂದ ಗುರಿಯನ್ನು ಸಾಧಿಸುವ ಮನೋಭಾವನೆಯು ಚೆನ್ನಾಗಿ ಬೆಳೆಯಲು ಅವಕಾಶ ಇರುವುದಿಲ್ಲ.

ಒಂದು ಶಾಲೆಯಲ್ಲಿ ಹಿಂದುಳಿದ ಮಕ್ಕಳನ್ನು ಪರೀಕ್ಷಿಸಲಾಯಿತು. ಅವರಲ್ಲಿ ಪಾಠಗಳನ್ನು ಸರಿಯಾಗಿ ಕಲಿಯದಿರುವುದಕ್ಕೂ ಆಟದಲ್ಲಿ ಕಾರ್ಯಸಾಧನೆಯ ಮನೋಭಾವವಿಲ್ಲದಿರುವುದಕ್ಕೂ ಒಂದು ನಿಕಟ ಸಂಬಂಧವು ಕಾಣಬಂದಿತು. ತೇರ್ಗಡೆ ಹೊಂದದಿರುವ ಮಕ್ಕಳಲ್ಲಿ ಸೇಕಡ ೮೦ ರಷ್ಟು ಮಂದಿ ಆಟದಲ್ಲಿ ಕಾರ್ಯಸಾಧನೆಯ ಮನೋಭಾವವನ್ನು ವ್ಯಕ್ತಪಡಿಸಲಿಲ್ಲ. ಶಾಲೆಯಲ್ಲಿ ತೇರ್ಗಡೆ ಹೊಂದುವುದಕ್ಕೂ ಆಟದಲ್ಲಿ ಕಾರ್ಯಸಾಧನೆಯನ್ನು ತೋರಿಸುವುದಕ್ಕೂ ಇರುವ ಸಂಬಂಧವು ಇದರಿಂದ ಸ್ಪಷ್ಟವಾಗುವುದು. ಆದುದರಿಂದಲೇ ತಂದೆ ತಾಯಿಗಳು ಮಕ್ಕಳಿಗೆ ವಯಸ್ಸಿಗೆ ತಕ್ಕ ಆಟಿಕೆಗಳನ್ನು ಒದಗಿಸಬೇಕು. ಇಲ್ಲದಿದ್ದರೆ ಹತ್ತಾರು ಮನೆಯವರು ಸೇರಿ ಮಕ್ಕಳು ಆಡಲು ಒಂದು ಶಿಶುವಿಹಾರವನ್ನು ನಿರ್ಮಿಸಬೇಕು. ಅಥವಾ ಮುನಿಸಿಪಾಲಿಟಿಗಳಿರುವ ಕಡೆ ಶಿಶುವಿಹಾರಗಳನ್ನು ಸ್ಥಾಪಿಸಲು ಅಲ್ಲಿನ ಅಧಿಕಾರಿಗಳನ್ನು ಒತ್ತಾಯಪಡಿಸಬೇಕು.

ಯಾವ ಆಟಗೆಗಳನ್ನು ಹೆಚ್ಚಾಗಿ ಉಪಯೋಗಿಸುವರೆಂದು ಶಿಶುವಿಹಾರಗಳಿಗೆ ಬರುವ ಮಕ್ಕಳನ್ನು ಪರೀಕ್ಷಿಸಲಾಯಿತು. ಅತ್ಯಂತ ಪ್ರಿಯವಾದ ಆಟಗೆಗಳು-ಬೇರೆ ಬೇರೆ ಆಕಾರಗಳನ್ನು ರಚಿಸಲು ಸಾಧ್ಯವಾದ ಬಣ್ಣಬಣ್ಣದ ಮಣಿಗಳು, ಗೋಲಿಗಳು, ಬಳೆಚೂರುಗಳು ಮುಂತಾದುವು. ಇವುಗಳಿಗಿಂತ ಕಡಮೆ ಇಷ್ಟವಾದ ಆಟಗೆ

ಗಳಾವುವೆಂದರೆ—ಮರದ ತುಂಡುಗಳು, ಹುಣಿಸೆಬೀಜ, ಬಣ್ಣದ ಮರದ ತುಂಡುಗಳು, ಕಪ್ಪುಹಲಗೆ, ಸೀಮೆಸುಣ್ಣ ಮುಂತಾದುವು. ಇನ್ನೂ ಕಡಮೆ ಪ್ರಿಯವಾದುವು—ರೈಲುಗಾಡಿ, ಮೂರು ಚಕ್ರದ ಗಾಡಿ ಮುಂತಾದುವು. ಇವುಗಳೆಲ್ಲಕ್ಕಿಂತಲೂ ಕಡಮೆ ಇಷ್ಟವಾದುವು ಕೀಲು ಬೊಂಬೆಗಳು, ಸಣ್ಣ ಆಟದ ಮೋಟಾರುಗಳು ಮೊದಲಾದುವು ಗಳು. ಈ ಪರೀಕ್ಷಣದಿಂದ ನಾವು ಸಾಧಾರಣವಾಗಿ ಮಕ್ಕಳಿಗೆ ಅವರಿಗೆ ಇಷ್ಟವಿಲ್ಲದ ಆಟಿಗೆಗಳನ್ನೇ ವಿಶೇಷವಾಗಿ ಕೊಂಡುಕೊಡು ತ್ತಿದ್ದೇವೆಂಬುದು ಸ್ಪಷ್ಟವಾಗುವುದು. ನಿಜವಾಗಿಯೂ ಮಕ್ಕಳಿಗೆ ಬೇಕಾದ ಸಾಮಾನುಗಳು ಅಂಗಡಿಯಲ್ಲಿ ದೊರೆಯುವುದೇ ಇಲ್ಲ. ಅವರಿಗೆ ಬೇಕಾದುದು ಹೆಚ್ಚು ಬೆಲೆಯ ಕೀಲುಬೊಂಬೆಗಳಲ್ಲ; ಇಷ್ಟಾನುಸಾರವಾಗಿ ಮುರಿದು ಜೋಡಿಸಿ ಹೊಸ ಹೊಸ ಆಕೃತಿಗ ಳನ್ನು ನಿರ್ಮಿಸುವಹಾಗಿರಬೇಕು.

ಒಂದು ಮಗುವಿಗೆ ಹೊಸ ಆಟದ ಸಾಮಾನುಗಳನ್ನು ಅದು ಹಟ ಹಿಡಿದನಂತರ ತಂದೆ ತಾಯಿಗಳು ಸ್ವಲ್ಪವೋ ಹೆಚ್ಚೋ ಹಣ ವನ್ನು ವೆಚ್ಚಮಾಡಿ ತೆಗೆದುಕೊಟ್ಟರೆ ಅದು ಸ್ವಲ್ಪಹೊತ್ತು ಆ ಆಟಿಗೆ ಯೊಡನೆ ಆಡಿಕೊಂಡಿದ್ದು ಅನಂತರ ಒಂದು ಕಡೆ ಬಿಸಾಡುವುದು. ಆಗ ತಂದೆ ತಾಯಿಗಳೇ ಮಗುವಿನ ಮೇಲೆ ಅತಿಯಾಗಿ ಕೋಪಿಸು ವರು. ಈ ಕೋಪವು ಮಕ್ಕಳನ್ನು ಕುರಿತ ಜ್ಞಾನವು ಸಾಕಾದಷ್ಟಿಲ್ಲ ದಿರುವುದರಿಂದ ಉಂಟಾಗುವುದೆಂದು ಹೇಳಬೇಕಾಗಿದೆ. ಏಕೆಂ ದರೆ ಪ್ರಯೋಗದ ಮೂಲಕ ನಮಗೆ ಗೊತ್ತಿರುವಂತೆ ಎರಡು ವರ್ಷದ ಮಗು ಸಾಧಾರಣವಾಗಿ ಎರಡೂವರೆ ನಿಮಿಷಗಳ ಕಾಲವೂ, ಮೂರು ವರ್ಷದ ಮಗುವು ನಾಲ್ಕುಮುಕ್ಕಾಲು ನಿಮಿಷಗಳ ಕಾಲವೂ ನಾಲ್ಕು ವರ್ಷದ ಮಗುವು ಐದೂವರೆ ನಿಮಿಷಗಳ ಕಾಲವೂ ನಿರಾ ತಂಕವಾಗಿ ಮಧ್ಯೆ ನಿಲ್ಲಿಸದೆ ಆಡಿಕೊಳ್ಳುವುದು. ಆದುದರಿಂದ

ತೆಗೆದುಕೊಟ್ಟ ಸಾಮಾನಿನೊಡನೆ ದೀರ್ಘಕಾಲ ಆಡಲಿಲ್ಲವೆಂದು ಕೋಪಗೊಳ್ಳುವುದು ಸರಿಯಲ್ಲ. ಹೂವಿನಿಂದ ಹೂವಿಗೆ ಹಾರಿ ಒಂದು ಕಡೆ ನಿಲ್ಲದೆ ಸದಾ ಚಲಿಸುತ್ತಿರುವ ದುಂಬಿಯಂತಿರುವ ಮಗು ವಿನ ಸ್ವಭಾವವನ್ನು ಅರಿಯದೆ ನಾವು ವೃಥಾ ಕೋಪಕ್ಕೆ ಒಳಗಾಗು ತ್ತೇವೆ.

ಪ್ರಾಥಮಿಕ ಶಾಲೆಗಳಿಗೆ ಹೋಗುವ ಹುಡುಗ ಹುಡುಗಿಯ ರಿಗೆ ಮನೆಗೆಲಸಗಳಲ್ಲಿ ತಂದೆತಾಯಿಯರಿಗೆ ಸಹಾಯಮಾಡುವುದೇ ಬಹಳ ಇಷ್ಟವಾದ ಆಟವೆಂದು ಕಂಡುಬಂದಿದೆ. ದೊಡ್ಡವರು ಕೆಲಸಗಳೆಂದು ತಿಳಿದುಕೊಂಡಿರುವ ತಟ್ಟೆಗಳನ್ನು ತೊಳೆಯುವುದು, ಮನೆ ಗುಡಿಸುವುದು, ಸಾರಿಸುವುದು, ರಂಗವಲ್ಲಿ ಇಡುವುದು ಮುಂತಾ ದುವು ಮಕ್ಕಳಿಗೆ ಅತಿ ಪ್ರಿಯವಾದ ಆಟಗಳಾಗಿರುವುವು. ದೊಡ್ಡ ವರು ತಮ್ಮ ಕೆಲಸಗಳನ್ನು ಶ್ರದ್ಧೆಯಿಂದ ಹೇಗೆ ಮಾಡುವರೋ ಹಾಗೆ ಮಕ್ಕಳು ತಮ್ಮ ಆಟಗಳನ್ನು ಅಷ್ಟೇ ಶ್ರದ್ಧೆಯಿಂದ ಆಡುವರು. ಆದುದರಿಂದ ಆಟವಾಡಿ ಬಂದ ಮಗುವನ್ನು "ನೀನು ಸುಮ್ಮನೆ ಕಾಲ ಕಳೆಯುತ್ತೀಯೆ, ಬಟ್ಟೆಯೆಲ್ಲವನ್ನೂ ಹಾಳುಮಾಡಿಕೊಂಡೆ" ಎಂದು ತಿರಸ್ಕರಿಸಬಾರದು. ಅವರ ಆಟಕ್ಕೆ ತಕ್ಕ ಪ್ರೋತ್ಸಾಹವನ್ನೀಯ ಬೇಕು. ಆಡುವುದರ ಮೂಲಕ ಎಷ್ಟೋ ವ್ಯಕ್ತಿಸಂಬಂಧವಾದ ಮತ್ತು ಸಮಾಜ ಸಂಬಂಧವಾದ ಒಳ್ಳೆಯ ಗುಣಗಳನ್ನು ಮಕ್ಕಳು ಕಲಿಯುವರು.

ಮಕ್ಕಳ ಆಟದ ವಿಷಯದಲ್ಲಿ ವಯಸ್ಸಿಗೆ ತಕ್ಕ ಆಟಗೆಯು ಎಷ್ಟು ಮುಖ್ಯವೋ ವಯಸ್ಸಿಗೆ ತಕ್ಕ ಜೊತೆಗಾರರೂ ಅಷ್ಟೇ ಮುಖ್ಯ. ಸಮವಯಸ್ಕರ ಜೊತೆಯಲ್ಲಿ ಮಕ್ಕಳು ಇಷ್ಟಾನುಸಾರ ಆಡಿ ತಮ್ಮ ಇಚ್ಛೆಗಳಿಗೂ ಊಹೆಗಳಿಗೂ ರೂಪವನ್ನು ಕೊಡುವರು. ಹೀಗೆ ಮಾಡುವುದರಿಂದ ಮಕ್ಕಳ ಮನಸ್ಸಿನಲ್ಲಿ ಒಳತೋಟಿಯಿಲ್ಲದೆ ಉಲ್ಲಾ

ಸದಿಂದ ಬೆಳೆಯುವರು. ಇಷ್ಟೇ ಅಲ್ಲದೆ ಇತರರೊಡನೆ ಕೂಡಿ ಕೆಲಸ ಮಾಡುವುದನ್ನು ಕಲಿಯುವರು. ತಮ್ಮ ಇಚ್ಛೆಗಳು ಎಷ್ಟು ಸತ್ಯವೋ ಇತರರ ಇಚ್ಛೆಗಳೂ ಅಷ್ಟೇ ಸತ್ಯವೆಂದು ಅರಿಯುವರು ಮತ್ತು ಒಂದು ಗುಂಪಿನಲ್ಲಿ ನಾಯಕನೂ ಇರಬೇಕು ಹಿಂಬಾಲ ಕರೂ ಇರಬೇಕು ಎಂದು ತಿಳಿದು ವರ್ತಿಸುವರು. ಆದುದರಿಂದಲೇ ನಮ್ಮ ಮನೆಗಳಲ್ಲಿ ಎಷ್ಟೊಂದು ಸಲಕರಣೆಗಳನ್ನು ಒದಗಿಸಿಕೊಟ್ಟರೂ ಅವು ಮಗುವಿಗೆ ಸಾಲವು; ಜೊತೆಗಾರನೊಬ್ಬನಿರಲೇಬೇಕು. ಶಿಶು ವಿಹಾರಗಳಲ್ಲಿ ಮಾತ್ರವೇ ವಯಸ್ಸಿಗೆ ತಕ್ಕ ಜೊತೆಗಾರರೂ ವಯ ಸ್ಸಿಗೆ ತಕ್ಕ ಸಲಕರಣೆಗಳೂ ದೊರೆಯುವುವು.



# ಅಧ್ಯಾಯ ೮.

## ಶಿಸ್ತು ಮತ್ತು ಸಂಯಮ

ಮಕ್ಕಳನ್ನು ಒಂದು ಶಿಸ್ತಿನಿಂದ ಬೆಳಸುವುದು ಎಷ್ಟು ಕಷ್ಟಕರವಾದುದೆಂಬುದು ತಂದೆತಾಯಿಗಳಿಗೇ ಗೊತ್ತು. ಆದುದರಿಂದಲೇ ಮಕ್ಕಳು ಒಳ್ಳೆಯ ಮಾರ್ಗದಿಂದ ನಡೆದುಕೊಂಡರೆ ತಂದೆತಾಯಿಗಳು 'ಇದು ನಮ್ಮ ಪುಣ್ಯ' 'ನಮ್ಮ ಅದೃಷ್ಟ' ಎನ್ನುವರು. ಇತ್ತೀಚೆಗೆ ಮನಶ್ಶಾಸ್ತ್ರಜ್ಞರು ಈ 'ಅದೃಷ್ಟ' ವನ್ನು 'ದೃಷ್ಟ' ವನ್ನಾಗಿ ಮಾಡಲು ಪ್ರಯತ್ನಿಸಿರುವರು. ಈ ಪುಸ್ತಕದಲ್ಲಿ ಇದುವರೆಗೂ ತಿಳಿಸಿರುವಹಾಗೆ ಮಕ್ಕಳನ್ನು ಜಾಗರೂಕತೆಯಿಂದ ಗಮನಿಸಿದರೆ ಅವರ ಬೆಳೆವಣಿಗೆಯ ನಿಯಮಗಳನ್ನೂ ವರ್ತನಾತತ್ವಗಳನ್ನೂ ಬಹಳ ಮಟ್ಟಿಗೂ ಕಂಡುಹಿಡಿಯುಬಹುದೆಂದು ಸ್ಪಷ್ಟವಾಗುವುದು. ವರ್ತನೆಯ ತತ್ವಗಳನ್ನು ತಿಳಿದುಕೊಂಡರೆ ವರ್ತನೆಯ ರೂಪವನ್ನು ಬದಲಾಯಿಸಲು ಸಾಧ್ಯವಾಗುವುದು. ಒಂದು ವಿಷಯವನ್ನು ಕುರಿತ ತಿಳಿವಳಿಕೆಯಿದ್ದರೆ ಆ ವಿಷಯವನ್ನು ಹತೋಟಿಯಲ್ಲಿಟ್ಟುಕೊಳ್ಳಬಹುದು. ಇದೇ ವಿಜ್ಞಾನದ ಗುರಿ. ಇದರಿಂದಲೇ ಇಂದು ವಿಜ್ಞಾನವು ಮಾನವನ ಸುಖಮಯ ಜೀವನಕ್ಕೆ ಸಾಧಕವಾಗಿರುವುದು.

ಪಾಶ್ಚಾತ್ಯ ದೇಶಗಳಲ್ಲಿ ಮಕ್ಕಳ ವರ್ತನೆಯಿಂದ ತಂದೆತಾಯಿಗಳಿಗೆ ಕಷ್ಟನಿಷ್ಠುರಗಳೊದಗಿದರೆ ಮಕ್ಕಳನ್ನು ವರ್ತನಾ ಚಿಕಿತ್ಸಾಲಯ (ಚೈಲ್ಡ್ ಗೈಡೆನ್ಸ್ ಕ್ಲಿನಿಕ್) ಗಳಿಗೆ ಕರೆದುಕೊಂಡು ಹೋಗಿ ಮನಶ್ಶಾಸ್ತ್ರಜ್ಞರ ಕೈಯಲ್ಲಿ ಅವರನ್ನು ಪರೀಕ್ಷಿಸಿ ಅವರ ವರ್ತನೆ

ಯನ್ನು ತಿದ್ದಲು ತಕ್ಕ ಏರ್ಪಾಡುಗಳನ್ನು ಮಾಡುವರು. ಬೊಂಬಾಯಿ ನಗರದಲ್ಲಿ ಇಂತಹ ಒಂದು ಸಂಸ್ಥೆಯಿರುವುದು. ಅದರಿಂದ ಆ ನಗರದ ನಿವಾಸಿಗಳಿಗೂ ಅಧಿಕಾರಿಗಳಿಗೂ ಎಷ್ಟೋ ಸಹಾಯವು ದೊರೆಯುತ್ತಿದೆ. ಸಂಸ್ಕೃತಿಯು ಬೆಳೆಯುತ್ತ ಬೆಳೆಯುತ್ತ ಪಟ್ಟಣಗಳು ದೊಡ್ಡದಾಗುವುವು. ಪಟ್ಟಣವು ದೊಡ್ಡದಾದರೆ ವರ್ತನಾ ಸಮಸ್ಯೆಗಳೂ ಹೆಚ್ಚಾಗುವುವು. ಆದುದರಿಂದ ದೊಡ್ಡ ಪಟ್ಟಣಗಳಲ್ಲಿ ಪುಂಡರ ಮತ್ತು ಕಳ್ಳಕಾಕರ ಹಾವಳಿಯು ಹೆಚ್ಚಾಗುವುದು. ಹಳ್ಳಿಯಲ್ಲಿ ಬಾಳುವ ಜನರಿಗೆ ಇಂತಹ ದುಸ್ಥಿತಿಗಳು ಒದಗುವುದು ಕಡಮೆ. ದುರ್ವರ್ತನೆಯನ್ನು ಕಂಡಕೂಡಲೆ ಸುತ್ತ ಮುತ್ತಲಿನ ಮನೆಯವರು ಹುಡುಗರನ್ನು ಖಂಡಿಸುವರು ; ಆದರೆ ಪೇಟೆ ಪಟ್ಟಣಗಳಲ್ಲಿ ಕಂಡು ಹಿಡಿಯುವುದೂ ಕಷ್ಟ ; ಖಂಡಿಸುವುದೂ ಕಷ್ಟ.

ಮಕ್ಕಳಲ್ಲಿ ದುರ್ವರ್ತನೆಯು ಅನೇಕ ರೂಪಗಳನ್ನು ತಾಳುವುದು. ಹುಡುಗನು ಮನೆಯ ಯಾವ ಶಿಸ್ತಿಗೂ ಒಳಪಡದೆ, ತಂದೆ ತಾಯಿಗಳನ್ನು ಬೈದು ಮನೆಯಿಂದ ಓಡಿಹೋಗಬಹುದು. ಮನೆಯಿಂದ ಶಾಲೆಗೆ ಹೋಗುವೆನೆಂದು ಹೊರಟು ಶಾಲೆಗೆ ಹೋಗದೆ ದುಷ್ಟರೊಡನೆ ಸೇರಿ ಕಾಲ ಕಳೆಯಬಹುದು. ಇಂತಹ ಮಕ್ಕಳು ಸಮಯ ನೋಡಿ ಇತರರ ಮನೆಗಳಿಂದಲೋ ಇತರರ ಜೇಬಿನಿಂದಲೋ ಪದಾರ್ಥಗಳನ್ನೂ ಹಣವನ್ನೂ ಕದ್ದು ತಮ್ಮ ಜೊತೆಯವರೊಡನೆ ಸೇರಿ ಮನಸ್ಸಿಗೆ ಬಂದಂತೆ ಖರ್ಚುಮಾಡುವರು. ಮತ್ತೆ ಕೆಲವು ಮಕ್ಕಳು ಕಳ್ಳತನ ತುಂಟತನಗಳಿಗೆ ಹೋಗದೆ ಸಿಕ್ಕಾಬಟ್ಟೆ ಸುಳ್ಳು ಹೇಳುವುದನ್ನು ಕಲಿಯುವರು. ತಂದೆತಾಯಿಗಳು ಹೇಳಿದ ಕೆಲಸವನ್ನು ಮಾಡದೆ ಸುಳ್ಳು ಹೇಳಿ ತಪ್ಪಿಸಿಕೊಳ್ಳುವರು. ಮತ್ತೆ ಕೆಲವು ಮಕ್ಕಳು ನಿಯಮಿತವಾದ ಕೆಲಸಗಳಲ್ಲಿ ನಿರಾಶೆ ಹೊಂದಿ ತಂದೆ ತಾಯಿಗಳನ್ನು ಪೀಡಿಸುವರು. ಅವರು ಹೇಳಿದುದಕ್ಕೆ ಪತ್ರಿ

ಯಾಗಿ ನಡೆದು ಅವರ ಮನಸ್ಸನ್ನು ನೋಯಿಸುವರು. ಇತರ ಮಕ್ಕಳೊಡನೆ ಸೇರಿ ಆಡುವಾಗ ಅವರನ್ನು ಬೈದು ಹೊಡೆದು ಕಚ್ಚಿ ಕುಟುಂಬಿಗಳ ಮಧ್ಯೆ ಜಗಳಕ್ಕೆ ಕಾರಣರಾಗುವರು. ಇಂತಹ ವರ್ತನೆಗಳಿಗೆಲ್ಲ ಸ್ವಪ್ರತಿಷ್ಠೆಯೇ ಕಾರಣ. ಹಟಮಾರಿತನ ದುರಾಗ್ರಹಗಳ ಮೂಲಕ ತಂದೆತಾಯಿಗಳಿಗೂ ಇತರರಿಗೂ ಸಂಕಟವನ್ನುಂಟು ಮಾಡುವರು.

ಮತ್ತೆ ಕೆಲವು ಮಕ್ಕಳು ಅಂಜಿಕೆ ನಾಚಿಕೆಗಳಿಂದ ಕೂಡಿದ ವರ್ತನೆಯ ಮೂಲಕ ತಂದೆತಾಯಿಗಳಿಗೆ ತೊಂದರೆಯನ್ನು ಕೊಡುವರು. ಇತರ ಹುಡುಗರೊಡನೆ ಸೇರಿ ಆಡುವುದಿಲ್ಲ. ಯಾವುದಾದರೂ ಕೆಲಸವನ್ನು ಮಾಡಹೇಳಿದರೆ ಹೆದರಿ ಹಿಂಜರಿಯುವರು. ಆತ್ಮ ಭರವಸೆಯೇ ಇಲ್ಲದೆ ಯಾವ ಕೆಲಸವನ್ನೂ ಕೈಗೊಳ್ಳುವುದೇ ಇಲ್ಲ. ಯಾವಾಗಲೂ ತಾಯಿಯ ಸೆರಗನ್ನೇ ಹಿಡಿದು ಆಕೆಯ ಆಸರೆಯಲ್ಲಿಯೇ ಇರಬಯಸುವರು. ಶಾಲೆಗೆ ಕಳುಹಿಸಿದರೆ ಹೋಗಲು ಹೆದರುವರು; ಹೋದರೂ ಒಂಟಿಯಾಗಿದ್ದು ಸ್ವಪ್ರತಿಷ್ಠೆಯ ಮಕ್ಕಳ ಕೈಗೆ ಸಿಕ್ಕಿ ನಾನಾಕಷ್ಟಗಳಿಗೆ ಗುರಿಯಾಗುವರು.

ಆದುದರಿಂದಲೇ ಇಂತಹ ಮಕ್ಕಳು ಶಾಲೆಗೆ ಹೋಗಲು ಹಿಂಜರಿಯುವುದು. ಪದೇ ಪದೇ ತಂದೆತಾಯಿಗಳು ಪ್ರೋತ್ಸಾಹ ಮಾಡಿದರೆ ನಿಯಮಿತ ಕೆಲಸಗಳನ್ನು ಮಾಡುವರು. ಈ ದುಷ್ಪರಿಣಾಮಗಳೆಲ್ಲವೂ ಮಗುವಿನಲ್ಲಿ ಹೆದರಿಕೆಯು ಹೆಚ್ಚಾಗಿದ್ದು ಸ್ವಾವಲಂಬನವು ಕಡಮೆಯಾಗಿರುವುದರಿಂದ ಉಂಟಾಗುವುವು.

ಈ ವಿಧವಾಗಿ ವಿಪರೀತ ವರ್ತನೆಯನ್ನು ವ್ಯಕ್ತಪಡಿಸುವ ಮಕ್ಕಳನ್ನು ತಂದೆತಾಯಿಗಳು ಹೇಗೆ ತಿದ್ದಬೇಕು ? ಈ ಚಿಕ್ಕ ಅಧ್ಯಾಯದಲ್ಲಿ ಸಮಸ್ಯೆಗಳೆಲ್ಲವನ್ನೂ ಪರಿಹಾರಮಾಡಲು ನಿರ್ದಿಷ್ಟವಾದ ಮಾರ್ಗವನ್ನು ವಿವರವಾಗಿ ತಿಳಿಸಲು ಸಾಧ್ಯವಿಲ್ಲವಾದರೂ ಮುಖ್ಯಾಂಶಗಳನ್ನು ಸೂಕ್ಷ್ಮವಾಗಿ ಹೇಳಲಾಗಿದೆ.

ಮುಂಗೋಪ, ಹಟಮಾರಿತನ, ಕ್ರೂರತನ, ಅತಿಯಾದ ಹೆದರಿಕೆ, ಅತಿಯಾದ ನಾಚಿಕೆ ಮುಂತಾದುವುಗಳು ಸಾಧಾರಣ ಮಕ್ಕಳಲ್ಲಿಯೂ ಕೆಲವು ವೇಳೆ ಕಂಡುಬರುವುದುಂಟು. ಇದರಿಂದ ತಂದೆತಾಯಿಗಳು ನಿರಾಶೆಗೊಳ್ಳಲು ಕಾರಣವಿಲ್ಲ. ಸಾಧಾರಣವಾಗಿ ಈ ಕೆಟ್ಟ ವರ್ತನೆಗಳು ಮಗು ಬೆಳೆಯುತ್ತ ಬೆಳೆಯುತ್ತ ಅಳಿಸಿಹೋಗುವುವು. ಅಲ್ಲದೆ ಹಟಮಾರಿತನವು ಮಗುವಿನ ಬೆಳವಣಿಗೆಯಲ್ಲಿ ಒಂದು ಮುಖ್ಯ ಅಂಶವೆಂದೇ ಕೆಲವು ವೈಜ್ಞಾನಿಕರು ಹೇಳುವರು. ಮುಖ್ಯವಾಗಿ ಮಗುವಿನ ಎರಡನೆಯ ವರ್ಷದಿಂದ ನಾಲ್ಕುವರ್ಷ ವಯಸ್ಸಿನ ವರೆಗೆ ಹಟಮಾರಿತನವನ್ನು ತೋರಿಸುವುದು ಸ್ವಾಭಾವಿಕವಾದುದೆಂದು ಹೇಳುವರು. ಈ ವಯಸ್ಸಿನಲ್ಲಿ ಮಕ್ಕಳು ಹೇಳಿದ ಕೆಲಸವನ್ನು ಬಾಯಿ ಮುಚ್ಚಿಕೊಂಡು ಮಾಡುವುದು ಹೋಗಿ ಒಂದೊಂದನ್ನೂ ಪ್ರಶ್ನಿಸುವ ಇಚ್ಛೆಯು ಅವರಲ್ಲಿ ತಲೆದೋರುವುದು. ಇತರರೊಡನೆ ವರ್ತಿಸುವ ಶಿಷ್ಟಾಚಾರವು ಇನ್ನೂ ಗೊತ್ತಿರುವುದಿಲ್ಲ. ಯಾವುದು ಸರಿ ಯಾವುದು ತಪ್ಪು ಎಂಬ ತಿಳಿವಳಿಕೆಯಿರುವುದಿಲ್ಲ. ಈ ಕಾರಣಗಳಿಂದ ಹಟಮಾರಿತನ, ಹೇಳಿದುದಕ್ಕೆ ಪ್ರತಿ ಹೇಳುವುದು ಮುಂತಾದ ದುರ್ಗುಣಗಳು ಕಾಣಿಸಿಕೊಳ್ಳುವುವು. ಆದುದರಿಂದ ಈ ಹಟಮಾರಿತನವು ಕೆಟ್ಟ ವರ್ತನೆಯೆಂದು ಹೇಳಲಾಗುವುದಿಲ್ಲ. ಮಗು ತನ್ನ ಆವರಣವನ್ನೂ ಇತರರೊಡನೆ ವರ್ತಿಸುವುದನ್ನೂ, ಇಚ್ಛೆಯ ಸಫಲತೆಯನ್ನೂ ತಿಳಿದುಕೊಂಡು ಕ್ರಮಬದ್ಧವಾಗಿ ಮಾಡಿಕೊಳ್ಳಬೇಕೆಂಬ ಬಯಕೆಯೇ ಈ ವರ್ತನೆಗೆ ಕಾರಣವಾಗುವುದು. ಇದು ಮಗುವಿನ ಬೆಳವಣಿಗೆಯಲ್ಲಿ ಒಂದು ಮುಖ್ಯವಾದ ಅಂಶ. ಈ ಸಮಯದಲ್ಲಿ ತಂದೆತಾಯಿಗಳು ಬೇಸರಗೊಂಡೋ ಕೋಪಗೊಂಡೋ ಅವರನ್ನು ಗದರಿಸಿದರೆ ಹೊಡೆದು ಬೈದರೆ ಮಕ್ಕಳಲ್ಲಿ ಹೆದರಿಕೆಯುಂಟಾಗಿ, ಸ್ವಾವಲಂಬನವು ಕಡಮೆಯಾಗುವುದು.

ಎರಡು ವರ್ಷಗಳಿಂದ ನಾಲ್ಕು ವರ್ಷದೊಳಗಿನ, ಹಟಮಾರಿ ತನ ಮಾಡಿ ಶಿಸ್ತಿಗೆ ಒಳಪಡದಿರುವ ನೂರು ಮಕ್ಕಳನ್ನು ಪರೀಕ್ಷಿಸಿ ನೋಡಿದುದರಲ್ಲಿ ಅವರು ಬೆಳೆದಮೇಲೆ ಸೇಕಡ ೮೦ ರಷ್ಟು ಮಕ್ಕಳು ಹಟಮಾರಿತನವನ್ನು ಬಿಟ್ಟು ದೃಢಚಿತ್ತರಾಗಿ ಬೆಳದರೆಂದು ತಿಳಿದು ಬಂದಿತು. ಆದರೆ ಈ ವಯಸ್ಸಿನಲ್ಲಿ ಯಾವ ತಂಟೆಯನ್ನೂ ಮಾಡದೆ ಹೇಳಿದುದನ್ನು ಕೇಳಿ ನಡೆಯುತ್ತಿದ್ದ ನೂರು ಮಕ್ಕಳಲ್ಲಿ ಸೇಕಡ ೨೬ ಮಂದಿ ಮಾತ್ರ ದೃಢಚಿತ್ತರಾಗಿ ಬೆಳೆದರು. ಈ ಪರೀಕ್ಷೆಯಿಂದ ಹಟಮಾರಿತನಕ್ಕೂ ಮುಂದಿನ ಸ್ಥಿರಬುದ್ಧಿಗೂ ಇರುವ ಸಂಬಂಧವೂ ವಿದಿತವಾಗುವುದು.

ಮಗು ಹಟಮಾರಿಯೆಂದು ಅವನ ಹಟವನ್ನು ತಪ್ಪಿಸಲು ಅವನನ್ನು ಬಯ್ಯುತ್ತಿದ್ದರೆ ಅವನು ನಿರಾಶೆಗೊಳ್ಳಬಹುದು. ಪದೇ ಪದೇ "ನೀನು ಹಟಮಾರಿ" "ನೀನು ಸರಿಯಾಗಿ ಬಾಳುವುದಿಲ್ಲ" ಎಲ್ಲರ ಕೈಯ್ಯಲ್ಲಿಯೂ ಛೀಗುಟ್ಟಿಸಿಕೊಳ್ಳುವುದೇ ನಿನ್ನ ಹಣೆಯ ಬರೆಹ" ಮುಂತಾಗಿ ಹೇಳುತ್ತಿದ್ದರೆ ಮಗು ಬೆಳೆದು ಹಾಗೆಯೇ ಆಗುವುದು. ಈ ವಯಸ್ಸಿನಲ್ಲಿ ತಾಯಿ ತಂದೆಗಳು ಪದೇಪದೇ ಹೇಳಿದುದನ್ನು ನಂಬುವುದು. ತಂದೆತಾಯಿಗಳ ಮನಸ್ಸಿನಲ್ಲಿ ತಮ್ಮ ಒಳ್ಳೆಯ ಗುಣಗಳನ್ನು ಪಡೆದು ಅಭಿವೃದ್ಧಿಗೆ ಬರಬೇಕೆಂಬ ಅಭಿಲಾಷೆ ಆಕಾಂಕ್ಷೆಗಳಿದ್ದರೂ ಹೊರಗಡೆ ಮಗುವನ್ನು "ನೀನು ಕೆಲಸಕ್ಕೆ ಬಾರದವನು ; ನೀನು ಹೇಡಿ" ಎಂದು ಪದೇ ಪದೇ ಹೇಳುವುದರಿಂದ ಮಗು ಅದನ್ನೇ ಕುರಿತು ಮನಸ್ಸಿನಲ್ಲಿ ಕೊರಗುತ್ತಾ ಕೆಲಸಕ್ಕೆ ಬಾರದವನಾಗಿಯೇ ಬೆಳೆಯುವನು. ಆದುದರಿಂದ ಮಗುವನ್ನು 'ನೀನು ಕೆಟ್ಟವನು' ಎಂದು ಹೇಳಿ ಖಂಡಿಸುವುದಕ್ಕಿಂತಲೂ 'ನೀನು ಒಳ್ಳೆಯವನಾಗಬೇಕು' ಎಂದು ಪ್ರೋತ್ಸಾಹಿಸಬೇಕು. ಉಪಾಧ್ಯಾಯರು ಸಹ ಮಕ್ಕಳಲ್ಲಿರುವ ಕೊರತೆಯನ್ನು ಪದೇ ಪದೇ ಎತ್ತಿ

ತೋರಿ "ನಿನ್ನ ತಲೆಗೆ ಹತ್ತುವುದಿಲ್ಲ ; ನೀನು ಕಲಿಯಲಾರೆ" ಎಂದು ಮೂದಲಿಸುವುದರಿಂದ ಮಕ್ಕಳ ಬೆಳವಣಿಗೆಯು ಮೊಟಕಾಗುವುದು. ಮುಖ್ಯವಾಗಿ ಮಕ್ಕಳ ಆತ್ಮ ಗೌರವಕ್ಕೆ ಕುಂದುಕವನ್ನುಂಟುಮಾಡುವ ಮಾತುಗಳನ್ನು ಆಡಬಾರದು. ಅವರಲ್ಲಿ ಸ್ವಾವಲಂಬನವು ಹೆಚ್ಚಿ ಆತ್ಮ ಭರವಸೆಯು ಬರುವಂತೆ ಮಾಡಬೇಕು.

ಹತ್ತು ಹನ್ನೆರಡು ವರ್ಷಗಳ ವಯಸ್ಸಿನಲ್ಲಿಯೇ ಕಳ್ಳತನ, ಕ್ರೂರತನ, ಪುಂಡಾಟ ಮುಂತಾದ ದುರ್ಗುಣಗಳನ್ನು ವ್ಯಕ್ತಪಡಿಸುವ ಮಕ್ಕಳನ್ನು ಪರೀಕ್ಷೆ ಮಾಡಿ ನೋಡಿದುದರಲ್ಲಿ ಎರಡು ಕಾರಣಗಳು ಬಹು ಮುಖ್ಯವೆಂದು ಕಂಡು ಬಂದಿತು. ಒಂದನೆಯದು ಮನೆಯಲ್ಲಿ ಶಿಸ್ತಿನ ಅಭಾವ, ಎರಡನೆಯದು ಕೆಟ್ಟ ಹುಡುಗರ ಸ್ನೇಹ. ತಂದೆ ತಾಯಿಗಳು ಪ್ರತಿನಿತ್ಯವೂ ಜಗಳವಾಡುತ್ತಿದ್ದರೆ, ಕುಡುಕರಾಗಿದ್ದರೆ, ಪರಸ್ಪರ ಪ್ರೇಮವಿಲ್ಲದೆ ದುರಾಚಾರದಿಂದ ವರ್ತಿಸುತ್ತಿದ್ದರೆ, ತಾಯಿಯು ಸತ್ತು ತಂದೆ ಮಾತ್ರ ಪೋಷಕನಾಗಿದ್ದರೆ, ಅಥವಾ ತಂದೆಯು ಸತ್ತು ತಾಯಿಯು ಪೋಷಕಳಾಗಿದ್ದರೆ, ಮಕ್ಕಳು ದುರ್ಮಾರ್ಗಿಗಳಾಗುವ ಸಂಭವವು ಬಹಳ ಹೆಚ್ಚು. ಇಂತಹ ಮನೆತನಗಳಲ್ಲಿಯೇ ಮಕ್ಕಳು ಹದಗೆಡುವುದಕ್ಕೆ ಅವಕಾಶವುಂಟಾಗುವುದು.

ಮಕ್ಕಳನ್ನು ಸನ್ಮಾರ್ಗದಲ್ಲಿ ಬೆಳಸಬೇಕಾದರೆ ಶಿಸ್ತಿನ ವಿಚಾರದಲ್ಲಿ ತಂದೆ ತಾಯಿಗಳಲ್ಲಿ ಪರಸ್ಪರ ಸಹಕಾರವಿರಬೇಕು. ತಾಯಿ ಒಂದು ಮಾತು, ತಂದೆ ಮತ್ತೊಂದು ಮಾತು ಹೇಳಿದರೆ ಮಗು ಇಬ್ಬರಲ್ಲಿಯೂ ಗೌರವವನ್ನು ಇಡುವುದಿಲ್ಲ. ತಾಯಿ ತಂದೆಗಳಲ್ಲಿ ಗೌರವ ವಿಡದ ಮಕ್ಕಳು ಉಪಾಧ್ಯಾಯರಲ್ಲಿಯೂ, ಸಮಾಜದ ನಿಬಂಧನೆಗಳಲ್ಲಿಯೂ ಗೌರವವನ್ನು ತೋರಿಸಲಾರರು. ಆದುದರಿಂದಲೇ ಶಿಸ್ತಿಗೆ ಒಳಪಡದೆ ದುರ್ಮಾರ್ಗಿಗಳಾಗಿ ಬೆಳೆಯುವರು.

ಎಷ್ಟೋ ವೇಳೆ ಹೆಂಡತಿಗೆ ಗಂಡನಲ್ಲಿ ಮರ್ಯಾದೆ ಇಲದೆ

ಹೋದರೆ ಆಕೆಯು ಮಕ್ಕಳನ್ನು ತನ್ನ ಕಡೆಗೆ ಸೇರಿಸಿಕೊಂಡು ತಂದೆಯನ್ನು ದೂಷಿಸುವಂತೆ ಪ್ರೋತ್ಸಾಹಿಸುವಳು. ಹೀಗೆ ಮಾಡುವುದರಿಂದ ತಾತ್ಕಾಲಿಕವಾಗಿ ಆಕೆಗೆ ಲಾಭ ದೊರೆತರೂ ಕೆಲವು ಕಾಲದ ನಂತರ ಮಕ್ಕಳು ಯಾವ ಶಿಸ್ತಿಗೂ ಒಳಪಡದೆ ಕೆಟ್ಟು ತಾಯಿಯ ದುಃಖಕ್ಕೆ ಕಾರಣವಾಗುವರು. ಗಂಡಹೆಂಡಿರಲ್ಲಿ ಎಷ್ಟು ವ್ಯತ್ಯಾಸಗಳಿದ್ದರೂ ಮಕ್ಕಳ ಮುಂದೆ ಅವೆಲ್ಲವನ್ನೂ ಅಡಗಿಸಿಕೊಂಡು ಒಗ್ಗಟ್ಟಿನಿಂದ ವರ್ತಿಸಬೇಕು.

ಒಂದು ಮಗುವಿನ ವಿಷಯವಾಗಿ ತಂದೆತಾಯಿಗಳಲ್ಲಿ ಅಸಮಾಧಾನವುಂಟಾದರೆ ಇದನ್ನು ಮಕ್ಕಳೆದುರಿಗೆ ಚರ್ಚಿಸದೆ ಮಗು ಹೊರಗೆ ಹೋದಮೇಲೆ ಚರ್ಚಿಸಿ ಒಂದು ತೀರ್ಮಾನಕ್ಕೆ ಬಂದು ಅದರಂತೆ ಮುಂದೆ ನಡೆದುಕೊಳ್ಳುವುದು ಹಿತವಾದ ಮಾರ್ಗ.

ತಂದೆತಾಯಿಗಳಲ್ಲಿ ಒಬ್ಬರು ಕಠಿನವಾಗಿಯೂ ಮತ್ತೊಬ್ಬರು ಅತಿ ಮೃದುವಾಗಿಯೂ ಇದ್ದರೆ ಮಕ್ಕಳ ಶಿಸ್ತಿಗೆ ಭಂಗಬರುವುದು. ಒಬ್ಬರು ಖಂಡಿಸಿದುದನ್ನು ಮತ್ತೊಬ್ಬರು ಎತ್ತಿಹಿಡಿದರೆ ಅಥವಾ ಮನ್ನಿಸಿಬಿಟ್ಟರೆ ಮಕ್ಕಳಲ್ಲಿ ಶಿಸ್ತು ತಪ್ಪಿಹೋಗುವುದು. ನಮ್ಮ ಮನೆಗಳಲ್ಲಿ ತಂದೆತಾಯಿಗಳಲ್ಲಿರುವ ವಿರೋಧಗಳಿಗಿಂತಲೂ ಅತ್ತೆ-ಸೊಸೆ, ಅತ್ತಿಗೆ-ನಾದಿನಿ, ತಂದೆ-ಅಜ್ಜ, ತಾಯಿ, ಅಜ್ಜಿ ಇವರ ವಿರೋಧಗಳಿಂದಲೇ ಮಕ್ಕಳ ಶಿಸ್ತು ಮುರಿದುಬೀಳುವುದು. ತಂದೆಯೊಂದು ಹೇಳಿದರೆ ಅಜ್ಜನು ಮತ್ತೊಂದು ಹೇಳುವುದು, ಹೀಗಾಗುವುದರಿಂದ ಮಕ್ಕಳು ಕ್ರಮಬದ್ಧವಾಗಿ ವರ್ತಿಸುವುದನ್ನು ಕಲಿಯುವುದಿಲ್ಲ.

ಮಕ್ಕಳು ತಾಯಿಯನ್ನೋ, ಅಜ್ಜಿಯನ್ನೋ, ದೊಡ್ಡಮ್ಮನನ್ನೋ ಅತಿಯಾಗಿ ಪ್ರೀತಿಸಿ, ಅವರ ಜೊತೆಯಲ್ಲಿಯೇ ಇದ್ದು ಅವರು ಹೇಳಿದ ಕೆಲಸವನ್ನೆಲ್ಲಾ ಮಾಡುತ್ತಿದ್ದರೆ, ಅವರಿಗೆ ಬಹಳ ಇಷ್ಟ. ಇದರಿಂದ ಮಗುವಿಗೆ ಉಂಟಾಗುವ ಹಾನಿಯನ್ನು ಅವರು

ಗಮನಿಸುವುದಿಲ್ಲ. ಚಿಕ್ಕ ವಯಸ್ಸಿನಿಂದಲೂ ಮಗು ಸ್ವತಂತ್ರವಾಗಿ ಬೆಳೆಯುವ ಹಾಗೆ ಪ್ರೋತ್ಸಾಹಿಸಬೇಕು. ಪರಾವಲಂಬಿಯಾದ ಮಗು ಶಿಸ್ತಿನ ಬಾಳಿಗೆ ಒಳಪಡಲಾರನು. ಇತರ ವ್ಯಕ್ತಿಗಳಲ್ಲಿ ಮಗುವಿನ ಇಚ್ಛೆಗಳೆಲ್ಲವೂ ಕೇಂದ್ರೀಕರಿಸಿದರೆ ಮಗುವಿನ ಬಾಳು ಸರಾಗವಾಗಿ ಮುಂದುವರಿಯಲಾರದು. ತಾಯಿಯನ್ನು ಅತಿ ಹೆಚ್ಚಾಗಿ ಪ್ರೇಮಿಸುವ ಮಗನು ಶಾಲೆಯಲ್ಲಿಯೇ ಆಗಲಿ ಮುಂದಿನ ಜೀವನದಲ್ಲಿಯೇ ಆಗಲಿ ತೇರ್ಗಡೆ ಹೊಂದಲಾರನು. ಹೆಂಡತಿಯ ಜೊತೆಯಲ್ಲಿ ಸುಖವಾಗಿ ಬಾಳಲಾರನು. ಹೀಗೆ ತಂದೆಯನ್ನು ಅತಿಯಾಗಿ ಪ್ರೀತಿಸುವ ಮಗಳು ಅನೇಕ ಕಷ್ಟಗಳಿಗೆ ಗುರಿಯಾಗುವಳು. ಮೊದಲಿನಿಂದಲೂ ಮಕ್ಕಳು ಸ್ವತಂತ್ರರಾಗಿ ಬೆಳೆಯುವ ಹಾಗೆ ಅವಕಾಶಗಳನ್ನು ಕಲ್ಪಿಸಿಕೊಡಬೇಕು. ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುವ ಹಾಗೆ ಪ್ರೋತ್ಸಾಹಿಸಬೇಕು.

ತಂದೆತಾಯಿಗಳು ಮಕ್ಕಳನ್ನು ಅತಿ ಹೆಚ್ಚಾಗಿ ಪ್ರೀತಿಸಿದರೆ ಮಕ್ಕಳ ಬೆಳವಣಿಗೆಗೆ ಲೋಪವುಂಟಾಗುವುದು. ತಂದೆತಾಯಿಗಳೇ ಎಲ್ಲ ಕೆಲಸಗಳನ್ನೂ ಮಾಡಿ ಮಕ್ಕಳನ್ನು ಪರಾವಲಂಬಿಗಳಾಗಿ ಮಾಡುವರು. ಮಗು ತನ್ನ ಕೆಲಸಗಳನ್ನು ತಾನೇ ಮಾಡಿಕೊಳ್ಳಲಾರದೆ, ತಂದೆ ತಾಯಿಗಳಿಂದ ಸಹಾಯವನ್ನು ನಿರೀಕ್ಷಿಸುವುದು. ಅಲ್ಲದೆ ಇಂತಹ ಮಕ್ಕಳು ಇತರ ಮಕ್ಕಳೊಡನೆ ಸಂಗ ಬೆಳಸಲು ಹಿಂಜರಿಯುವರು. ಮನೆಯಲ್ಲಿ ಎಲ್ಲ ಕೆಲಸಗಳನ್ನೂ ಇತರರ ಕೈಯಲ್ಲಿ ಹೇಗೆ ಮಾಡಿಸಿಕೊಳ್ಳುವರೋ ಅದೇ ರೀತಿ ಹೊರಗಡೆಯ ಜೀವನದಲ್ಲಿ ಸಹ ಇತರರು ತಮಗೆ ಸಹಾಯ ಮಾಡುವರೆಂದು ನಿರೀಕ್ಷಿಸಿ, ಅವರು ಮಾಡದಿದ್ದರೆ ಹತಾಶರಾಗುವರು. ಇಂತಹವರು ನೆರೆಹೊರೆಯವರನ್ನು ನಿಂದಿಸುವವರಾಗುವರು. ತಮ್ಮ ದುರದೃಷ್ಟಗಳಿಗೆಲ್ಲಾ ಇತರರು ಕಾರಣರೆಂದು ಭಾವಿಸುವರು.

ಅತಿ ಮುದ್ದಿನಿಂದ ಮಗುವಿಗೆ ಎಷ್ಟು ಕೆಡಕುಂಟಾಗುವುದೋ ಉದಾಸೀನತೆಯಿಂದಲೂ ಅಷ್ಟೇ ಹಾನಿಯುಂಟಾಗುವುದು. ಆಡ್ಲರ್ ಎಂಬ ಶಾಸ್ತ್ರಜ್ಞರು ಮನುಷ್ಯರ ಮಾನಸಿಕ ರೋಗಗಳಿಗೆಲ್ಲಾ ಅತಿ ಮುದ್ದು ಅಥವಾ ಅತಿಯಾದ ಉದಾಸೀನತೆಗಳೇ ಕಾರಣಗಳೆಂದು ಹೇಳುವರು. ಮನೆಯಲ್ಲಿ ತಂದೆ ತಾಯಿಗಳು ಮಗುವಿಗೆ ತಮ್ಮ ಗಮನವನ್ನು ಕೊಡದೆ ಹೋದರೆ ಮಗು ಪ್ರೇಮವೆಂದರೇನೆಂಬುದನ್ನೇ ಅರಿಯದೆ, ಜೀವನವು ಕ್ರೌರ್ಯದಿಂದಲೂ ಕಠಿಣತೆಯಿಂದಲೂ ತುಂಬಿಹೋಗುವುದು. ಇಂತಹ ಮಕ್ಕಳು ಸಹ ಇತರರೊಡನೆ ಸಂಗ ಬೆಳಸಲು ಹಿಂಜರಿಯುವರು. ಆದುದರಿಂದ ತಂದೆ ತಾಯಿಗಳು ಮಕ್ಕಳನ್ನು ಮಿತವಾದ ಮುದ್ದಿನಿಂದ ಬೆಳಸಿದರೆ ಅವರು ಸಂಗಪ್ರಿಯರಾಗಿ ಇತರರೊಡನೆ ಸೇರಿ ತಮ್ಮ ಜೀವನದ ಕೆಲಸಗಳನ್ನು ಸರಾಗವಾಗಿ ಮಾಡಿಕೊಳ್ಳುವರು.

ಮಕ್ಕಳನ್ನು ಒಂದು ಶಿಸ್ತಿನಿಂದ ಬೆಳಸಬೇಕಾದರೆ ಈ ಕೆಳಗಿನ ಅಂಶಗಳಿಗೆ ಗಮನ ಕೊಡಬೇಕು.—

ಮಗು ಅತ್ತಾಗ, ಹಟಮಾಡಿದಾಗ ಯಾವ ಕಾರಣದಿಂದ ಮಗುವಿಗೆ ತೊಂದರೆಯುಂಟಾಗಿದೆಯೆಂದು ಪರೀಕ್ಷಿಸಬೇಕು. ಬೇಸರಗೊಂಡು ಮಗುವಿನ ಮೇಲೆ ರೇಗಿಬಿದ್ದರೆ ಮಗುವಿನ ಹಟಮಾರಿತನವು ಹೆಚ್ಚುವುದು, ಅಥವಾ ತಂದೆ ತಾಯಿಗಳ ವಿಷಯದಲ್ಲಿ ಹೆಚ್ಚಾದ ಭಯವಿನಯಗಳನ್ನು ತೋರಿಸುವುದು. ಸ್ವಪ್ರತಿಷ್ಠೆಯನ್ನು ಇತರ ದಾರಿಗಳಲ್ಲಿ ಹರಿಯಬಿಡುವುದು. ಸುಳ್ಳು ಹೇಳುವುದು ಇತರ ಮಕ್ಕಳೊಡನೆ ಜಗಳವಾಡುವುದು, ಶಾಲೆಗೆ ಸರಿಯಾಗಿ ಹೋಗದಿರುವುದು, ಪಾಠಗಳನ್ನು ಸರಿಯಾಗಿ ಮಾಡದಿರುವುದು, ಹಾಸಿಗೆಯಲ್ಲಿ ರಾತ್ರಿ ವೇಳೆ ಉಚ್ಚೆ ಹೊಯ್ದುಕೊಳ್ಳುವುದು, ಉಗುರು ಕಡಿಯುವುದು, ತೊದಲುವುದು ಮುಂತಾದ ವಿಪರೀತ ವರ್ತನೆಗಳನ್ನು ತೋರಿಸುವುದು.

ಆದುದರಿಂದ ಮಕ್ಕಳ ಕಷ್ಟಗಳನ್ನು ಪರೀಕ್ಷಿಸಿ ಪರಿಹಾರಮಾಡು ವುದು ತಾಯಿ ತಂದೆಗಳ ಧರ್ಮವೆಂದರಿಯಬೇಕು

ಒಂದೆರಡು ವರ್ಷದ ಮಕ್ಕಳು ಸಹ ಹೇಳಿದ ಮಾತುಗಳನ್ನು ಗ್ರಹಿಸಬಲ್ಲುವು. ಮಗುವನ್ನು "ಈ ಕೆಲಸ ನೀನು ಮಾಡಬಾರದು ; ಇದು ತಪ್ಪು " ಎಂದು ಖಂಡಿಸುವುದಕ್ಕೆ ಬದಲಾಗಿ ಯಾವ ಕಾರಣ ದಿಂದ ಆ ಕೆಲಸ ಒಳ್ಳೆಯದಲ್ಲವೆಂದು ಅವರಿಗೆ ತಿಳಿಯುವ ಹಾಗೆ ಹೇಳಿದರೆ ಅದನ್ನು ಗ್ರಹಿಸಿ ತಮ್ಮ ಬಯಕೆಗಳ ಮೇಲೆ ಹತೋಟಿ ಯನ್ನು ಪಡೆಯಲು ಯತ್ನಿಸುವರು. ಈ ರೀತಿ ಮಕ್ಕಳ ಸಹಕಾರ ವನ್ನು ಪಡೆದು ಅವರನ್ನು ತಿದ್ದಬೇಕೇ ಹೊರತು ಅವರನ್ನು ಗದರಿಸಿ ಕೊಂಡು ತಿದ್ದತೊಡಗಿದರೆ ಅವರಿಗೆ ತಂದೆ ತಾಯಿಗಳಲ್ಲಿ ಪ್ರೇಮ ವಿಶ್ವಾಸಗಳು ಕಡಮೆಯಾಗುವುವು. ಕಾರಣವಿಲ್ಲದೆ ತನ್ನ ಕೆಲಸಕ್ಕೆ ತಂದೆ ತಾಯಿಗಳು ಅಡ್ಡಿಯಾಗುವರೆಂದು ಅವರ ಮೇಲಿನ ವಿಶ್ವಾಸವು ಅಳಿಸಿಹೋಗುವುದು.

ಮೊದಲಿನಿಂದಲೂ ಮಕ್ಕಳು ಬಯಕೆಗಳನ್ನು ಹತೋಟಿಯಲ್ಲಿ ಟ್ಟಿರಬೇಕೆಂಬುದಾಗಿ ಅವರಿಗೆ ತಿಳಿಸಬೇಕು, ತಮ್ಮ ಅಭಿಲಾಷೆ ಗಳನ್ನು ನೆರವೇರಿಸಿಕೊಳ್ಳುವಾಗ ಇತರರಿಗೆ ಅನನುಕೂಲವುಂಟಾಗ ದಂತೆಯೂ ಪ್ರಕೃತಿ ನಿಯಮಗಳಿಗೆ ವಿರೋಧವಿಲ್ಲದಂತೆಯೂ ಇರುವ ಹಾಗೆ ಮೊದಲಿನಿಂದಲೂ ಅವರಿಗೆ ಶಿಕ್ಷಣವನ್ನು ಕೊಡಬೇಕು.

ಮಕ್ಕಳನ್ನು ಶಿಸ್ತಿಗೆ ತರುವುದರಲ್ಲಿ ಒಂದು ಕ್ರಮವಿರಬೇಕು. ಮೊದಲು ಅವರು ಇಷ್ಟಾನುಸಾರ ಪ್ರವರ್ತಿಸುವುದಕ್ಕೆ ಬಿಟ್ಟು ಆ ಮೇಲೆ ಒಂದೇ ಸಲ ಕ್ರಮಬದ್ಧವಾಗಿರುವ ಹಾಗೆ ನಿರ್ಬಂಧಿಸಿದರೆ, ಮಕ್ಕಳಿಗೂ ತಂದೆ ತಾಯಿಗಳಿಗೂ ವಿರಸವುಂಟಾಗುವುದು. ಯಾವುದೇ ಅಂಶದಲ್ಲಿಯಾದರೂ ಮಕ್ಕಳ ವರ್ತನೆಯು ಅನುಚಿತವಾದರೆ ಅವ ರನ್ನು ಕ್ರಮೇಣ ತಿದ್ದುವುದಕ್ಕೆ ಏರ್ಪಾಡು ಮಾಡಬೇಕು. ಹೊಸ

ನಿಯಮಗಳನ್ನು ಅರಿತು ಅವುಗಳ ಪ್ರಕಾರ ನಡೆಯಲು ಸ್ವಲ್ಪಕಾಲ ಬೇಕಾಗುವುದು. ಇದನ್ನು ಅರಿಯದೆ ಅವರ ಮೇಲೆ ರೇಗಿಬಿದ್ದರೆ ಅವರ ಪ್ರೀತಿ ವಿಶ್ವಾಸಗಳನ್ನು ಕಳೆದುಕೊಳ್ಳಬೇಕಾಗುವುದು. ಒಳ್ಳೆಯ ನಡತೆಯನ್ನು ಕ್ರಮಬದ್ಧವಾಗಿ ಪ್ರೋತ್ಸಾಹಿಸಬೇಕು. ಹಾಗೆಯೇ ಕೆಟ್ಟ ನಡತೆಯನ್ನು ಪ್ರತಿಯೊಂದು ಸಲವೂ ಖಂಡಿಸಬೇಕು. ಹೀಗೆ ಏಕಪದ್ಧತಿಯನ್ನು ಅನುಸರಿಸುವುದು ಆವಶ್ಯಕ ಒಂದು ಸಲ ಸುಮ್ಮ ನಿದ್ದು ಮತ್ತೊಂದು ಸಲ ಪರಿಹಾಸ್ಯಮಾಡಿ, ಮೂರನೆಯ ಸಲ ಅದೇ ವರ್ತನೆಯನ್ನು ಖಂಡಿಸಿದರೆ ಮಗುವಿಗೆ ದಿಗ್ಭ್ರಮೆಯುಂಟಾಗುವುದು ಯಾವುದು ಸರಿಯಾದುದು ಎಂಬುದನ್ನು ತಿಳಿಯುವುದೇ ಕಷ್ಟವಾಗು ವುದು ಮಕ್ಕಳ ಶಿಸ್ತು ನಮ್ಮ ಅನುಕೂಲಗಳನ್ನೂ ಇಷ್ಟಗಳನ್ನೂ ಅನುಸರಿಸಿರಬಾರದು, ಕ್ರಮಬದ್ಧವಾಗಿರಬೇಕು.

ಮಕ್ಕಳಿಗೆ ನಾವು ಅಪ್ಪಣೆಮಾಡುವ ನಿಯಮಗಳು ಮೇಲ್ವಿಚಾ ರಣೆಗೆ ಒಳಪಡುವಂತಿರಬೇಕು. ಒಂದು ಕೆಲಸವನ್ನು ಹೇಳಿದರೆ ಅದನ್ನು ಮಗು ಮಾಡಿತೋ ಬಿಟ್ಟಿತೋ ಎಂಬುದನ್ನು ನೋಡಿಕೊಳ್ಳು ವುದು ಆವಶ್ಯಕ. ಎಷ್ಟೋ ಸಲ ಮಗು ಏನಾದರೂ ಅನುಚಿತವಾದ ಕೆಲಸವನ್ನು ಮಾಡುತ್ತಿದ್ದಾಗ ಅದನ್ನು ಖಂಡಿಸಿದರೂ ಮಗು ಆ ಕೆಲಸವನ್ನು ಬಿಟ್ಟಿತೋ ಇಲ್ಲವೋ ಗಮನಿಸುವುದೇ ಇಲ್ಲ. ಹೀಗೆ ಮಾಡಿದರೆ ತಂದೆ ತಾಯಿಗಳ ಮಾತುಗಳಲ್ಲಿ ಮಗುವಿಗೆ ಗೌರವವಿರು ವುದಿಲ್ಲ. ಅದನ್ನು ಬೈದರೆ “ ನಮ್ಮ ತಾಯಿ ಯಾವಾಗಲೂ ಹೀಗೇ ” ಎಂದು ಹೇಳಿಕೊಂಡು ತನ್ನ ಕೆಲಸವನ್ನು ತಾನು ಮುಂದುವರಿಸು ವುದು. ಹೀಗೆ ಯಾವುದಾದರೂ ಮಗುವಿಗೆ ಒಂದು ಕೆಲಸಮ್ನ ಮಾಡುವೆನೆಂದು ಮಾತು ಕೊಟ್ಟು ಆ ಮಾತನ್ನು ಮೀರದೆ ನಡಸಿ ಕೊಟ್ಟರೆ ಮಗುವಿಗೆ ತಂದೆತಾಯಿಗಳಲ್ಲಿ ನಂಬಿಕೆಯೂ ಗೌರವವೂ ಇರುವುವು. ಚಿಕ್ಕ ಮಕ್ಕಳಾದರೂ ಆಡಿದ ಮಾತಿಗೆ ಬೆಲೆ ಕೊಡಬೇಕು.

ಬೆಳಗ್ಗೆ ಕಛೇರಿಗೆಹೊರಟ ತಂದೆಯು ಮಗುವಿಗೆ ಒಂದು ವಸ್ತುವನ್ನು ತರುವೆನೆಂದು ಮಾತನ್ನು ಕೊಟ್ಟರೆ ಅದನ್ನು ತಂದೆಯು ಮರೆತರೂ ಮಗು ಮರೆಯುವುದಿಲ್ಲ. ಮತ್ತೆ ಸಾಯಂಕಾಲ ತಂದೆಯನ್ನು ನೋಡಿದ ಕೂಡಲೇ ಬೆಳಗ್ಗೆ ಆಡಿದ ಮಾತನ್ನು ಜ್ಞಾಪಿಸಿಕೊಳ್ಳುವುದು. ನಾಲ್ಕಾರು ಸಲ ತಂದೆಯು ಮಾತಿಗೆ ತಪ್ಪಿದರೆ ಕ್ರಮೇಣ ಮಗುವಿಗೆ ತನ್ನ ತಂದೆಯ ಮಾತಿನಲ್ಲಿ ನಂಬಿಕೆಯು ಕಡಮೆಯಾಗುತ್ತ ಹೋಗುವುದು.

ಶಿಸ್ತಿನ ವಿಷಯವಾಗಿ ಮೇಲೆ ನಾಲ್ಕಾರು ಅಂಶಗಳನ್ನು ವಿವರಿಸಲಾಗಿದೆಯಷ್ಟೆ. ಇವೆಲ್ಲಕ್ಕಿಂತಲೂ ಮಿಗಿಲಾಗಿ ಮಕ್ಕಳನ್ನು ಶಿಸ್ತಿನಲ್ಲಿಡಲು ಸಾಧ್ಯವಾಗಬೇಕಾದರೆ ತಂದೆತಾಯಿಗಳು ಮತ್ತು ಮನೆಯಲ್ಲಿರುವ ಇತರ ಹಿರಿಯರ ಪರಸ್ಪರ ಸಹಕಾರ ಭಾವನೆಯೇ ಮುಖ್ಯವಾದುದೆಂಬುದನ್ನು ಗಮನದಲ್ಲಿಡಬೇಕು. ಒಬ್ಬರು ಖಂಡಿಸಿದ ವರ್ತನೆಯನ್ನು ಮತ್ತೊಬ್ಬರು ಕ್ಷಮಿಸಿದರೆ ಅಥವಾ ಪ್ರೋತ್ಸಾಹಿಸಿದರೆ ಮಗು ನೀತಿ ನಿಯಮಗಳಿಗೆ ಅನುಸಾರವಾಗಿ ವರ್ತಿಸಲಾರದು.

ಮಕ್ಕಳಲ್ಲಿ ತುಂಟತನ, ದುರಾಚಾರ, ಹಟಮಾರಿತನ ಇವುಗಳೆಲ್ಲಕ್ಕೂ ಒಂದು ಮುಖ್ಯಕಾರಣ ಆಡಿಕೊಳ್ಳುವುದಕ್ಕೆ ಸರಿಯಾದ ಅವಕಾಶವಿಲ್ಲದಿರುವುದು. ಮಗು ತನ್ನ ಸಹಪಾಠಿಗಳೊಡನೆ ಅಥವಾ ತಾನೇ ಒಂಟಿಯಾಗಿ ವಯಸ್ಸಿಗೆ ತಕ್ಕ ಆಟವನ್ನು ಆಡುತ್ತಿದ್ದರೆ ಆಗ ದುರ್ವರ್ತನೆಗೆ ಅವಕಾಶವಿರುವುದಿಲ್ಲ. ಮಗುವನ್ನು ಒಂದು ಶಿಸ್ತಿನಿಂದ ಬೆಳಸಬೇಕಾದರೆ ಈ ಅಂಶಕ್ಕೆ ಹೆಚ್ಚು ಗಮನವನ್ನು ಕೊಟ್ಟು ಅದರ ವಯಸ್ಸಿಗೆ ತಕ್ಕ ಆಟಿಗೆಗಳನ್ನು ಒದಗಿಸಿಕೊಡುವುದು ಹಿರಿಯರ ಮುಖ್ಯಕರ್ತವ್ಯ. ಆಗ ತುಂಟತನಕ್ಕೂ ಹಟಮಾರಿತನಕ್ಕೂ ಆಸ್ಪದ ದೊರೆಯುವುದಿಲ್ಲ.

ಸೂಸನ್ ಐಸಾಕ್ ಎಂಬುವರು ತಮ್ಮ ಗ್ರಂಥದಲ್ಲಿ ಸೂಚಿಸಿರುವ ಹಾಗೆ ಮನೆಯಲ್ಲಿ ಹಿರಿಯರು ಈ ಕೆಳಗಿನ ಅಂಶಗಳನ್ನು ಗಮನಿಸಬೇಕು.

ಮಗುವಿಗೆ " ಇದನ್ನು ಮಾಡಬೇಡ " ಎನ್ನುವುದಕ್ಕೆ ಬದಲಾಗಿ " ಅದನ್ನು ಮಾಡು " ಎಂದು ಹೇಳುವುದು ಉತ್ತಮ.

ಮಗು ಮಾಡುತ್ತಿರುವ ಕೆಲಸವು ನಮಗೆ ತೊಂದರೆಯನ್ನುಂಟುಮಾಡಿದರೆ ಅವನನ್ನು " ನೀನು ತುಂಟ, ದುಷ್ಟ " ಎಂದು ಹೇಳುವುದು ಸರಿಯಲ್ಲ. ನಮ್ಮ ಅನನುಕೂಲದ ದೆಸೆಯಿಂದ ಅವರನ್ನು ಬಂಧಿಸುವುದು ಉಚಿತವಲ್ಲ.

ಮಕ್ಕಳ ವಿಚಾರವನ್ನು ಕುರಿತು ಅವರೆದುರಿಗೆ ಚರ್ಚೆ ಮಾಡುವುದು ಅನುಚಿತ. ಮತ್ತು ನಾವು ಮಾತಾಡುವುದನ್ನು ಅವರು ಗ್ರಹಿಸಲಾರರೆಂಬ ಭಾವನೆಯು ತಪ್ಪು. ಅವರು ನಾವು ಆಡುವ ಮಾತುಗಳನ್ನೂ ಮಾಡುವ ಕೆಲಸಗಳನ್ನೂ ಗಮನಿಸುವರು.

ಮಗು ಒಂದು ಕೆಲಸವನ್ನು ಮಾಡುತ್ತಿರುವಾಗ ಕಾರಣವಿಲ್ಲದೆ ಆ ಕೆಲಸಕ್ಕೆ ಅಡ್ಡಿ ಬರಬಾರದು. ಅಡ್ಡಿಯನ್ನುಂಟುಮಾಡಬೇಕಾದ ಆವಶ್ಯಕತೆಯಿದ್ದರೆ ಮಗುವಿಗೆ ಆ ಕಾರಣಗಳನ್ನು ತಿಳಿಸುವುದು ಒಳ್ಳೆಯದು.

ಮಗುವಿನಲ್ಲಿ ನಮಗಿರುವ ಪ್ರೀತಿಯನ್ನು ಅವನನ್ನು ಮುದ್ದಿಸುವುದರ ಮೂಲಕ ತೋರ್ಪಡಿಸುವುದಕ್ಕಿಂತಲೂ, ಅವನಿಗೆ ಬೇಕಾದ ಆಟಿಗೆಗಳನ್ನೂ ಇತರ ಅನುಕೂಲ ಅವಕಾಶಗಳನ್ನೂ ಒದಗಿಸುವುದರ ಮೂಲಕ ಹೊರಪಡಿಸಬೇಕು.

ಗಾಳಿ ಸಂಚಾರಕ್ಕೆ ಹೊರಟಾಗ ಮಗುವನ್ನು ಕರೆದುಕೊಂಡು ಹೋಗುತ್ತಿರುವೆವೆಂಬ ಭಾವನೆಗಿಂತ ಮಗುವಿನ ಜೊತೆಯಲ್ಲಿ ನಾವು ಹೋಗುತ್ತಿರುವೆವೆಂಬ ಭಾವನೆಯನ್ನು ಹಿರಿಯರು ಹೊಂದಿರುವುದು

ಒಳ್ಳೆಯದು. ಮಗುವಿಗೆ ಪ್ರಾಶಸ್ತ್ಯವನ್ನು ಕೊಡಬೇಕು. ಆಗ ಅದಕ್ಕೆ ಆತ್ಮಗೌರವ ಆತ್ಮ ಭರವಸೆಗಳುಂಟಾಗುವುವು.

ಬಿದ್ದಾಗ, ಊಟವನ್ನು ಸರಿಯಾಗಿ ಮಾಡದಿದ್ದಾಗ, ಮಗುವಿನ ಮುಂದೆ ತಂದೆ ತಾಯಿಗಳು ತಮ್ಮ ಅತಿಯಾದ ಆತುರತೆ ಮತ್ತು ವ್ಯಾಕುಲಗಳನ್ನು ಹೊರಪಡಿಸದೆ ಅಗತ್ಯವಾಗಿ ಮಾಡಬೇಕಾದುದನ್ನು ಮಾಡಿ ಸುಮ್ಮನಿರಬೇಕು.

ಪದೇ ಪದೇ ಮಕ್ಕಳನ್ನು ಪೀಡಿಸುವುದು, ಹೀಯಾಳಿಸುವುದು ಒಳ್ಳೆಯದಲ್ಲ. ಮಗುವನ್ನು ನೋಡಿ ಹಾಸ್ಯಮಾಡುವುದಕ್ಕಿಂತ ಅದರೊಡನೆ ಕೂಡಿ ನಗುವುದು ಲೇಸು.

ನೆರೆಹೊರೆಯವರು ಮನೆಗೆ ಬಂದಾಗ ಅವರ ಜೊತೆಯಲ್ಲಿ ಮಗುವಿನ ದುರ್ಗುಣಗಳನ್ನು ಕುರಿತು ನಿಂದಿಸುವುದಾಗಲೀ ಸುಗುಣಗಳನ್ನು ಕುರಿತು ಹೊಗಳುವುದಾಗಲೀ ಮಗುವಿನ ಮಾನಸಿಕ ಬೆಳವಣಿಗೆಗೆ ಹಿತಕಾರಿಯಾದುದಲ್ಲ. ಏಕೆಂದರೆ ನಮ್ಮ ಹಾಗೆಯೇ ಅವರಿಗೂ ಮಾನ ಮರ್ಯಾದೆಗಳಿವೆ. ನಾವು ಹೊಗಳಿಕೆಯಿಂದ ಗರ್ವಕ್ಕೆ ಒಳಗಾಗುವಂತೆಯೇ ಮಕ್ಕಳೂ ಗರ್ವಕ್ಕೆ ಒಳಗಾಗಿ ಕೆಡುವರು. ನಿಂದೆಯಿಂದ ದೊಡ್ಡವರು ಮನಕೊರಗಿ ಹತಾಶರಾಗುವ ಹಾಗೆ ಅವರಿಗೂ ಮನಸ್ಸು ನೋಯುವುದು.

ಕೆಟ್ಟ ಕೆಲಸ ಮಾಡಿದಾಗ ಅದನ್ನು ತಿದ್ದುವುದಕ್ಕೆ ಪ್ರಯತ್ನ ಪಡಬೇಕೇ ಹೊರತು ಮಗುವಿಗೆ ನೀತಿಬೋಧನೆ ಮಾಡಿ ಭಾಷಣವನ್ನು ಮಾಡಬಾರದು. ಹೀಗೆ ಮಾಡಿದರೆ ಕೆಟ್ಟ ಕೆಲಸವನ್ನು ಕುರಿತು ಜುಗುಪ್ಸೆ ಹುಟ್ಟುವುದಕ್ಕೆ ಬದಲು ಮಗುವಿನ ಮನಸ್ಸಿನಲ್ಲಿ ಭಾಷಣ ಮಾಡುವವರ ವಿಷಯದಲ್ಲಿ ಜುಗುಪ್ಸೆ ಉಂಟಾಗುವುದು.— ಅದರಲ್ಲಿಯೂ ಮುಖ್ಯವಾಗಿ ಐದಾರು ವರುಷ ಕಳೆದ ಮಕ್ಕಳಲ್ಲಿ.

ಕೋಪಗೊಂಡಾಗ ದುಷ್ಕಾರ್ಯಕ್ಕೆ ತಕ್ಕಷ್ಟು ಕೋಪವನ್ನು

ತಾಳಬೇಕೇ ಹೊರತು ಮಿತಿಮೀರಿದ ರೇಗಾಟವನ್ನು ತೋರಿಸ ಬಾರದು. ನಮ್ಮ ಕೋಪಕ್ಕೆ ಮಗುವಿನ ಕೆಟ್ಟ ವರ್ತನೆಯನ್ನು ಒಂದು ನೆಪವನ್ನಾಗಿ ಮಾಡಿಕೊಳ್ಳಬಾರದು. ಇತರರ ಮೇಲಿನ ಅಸ ಮಾಧಾನವನ್ನು ಮಗುವಿನ ಕಡೆಗೆ ತಿರುಗಿಸುವುದು ಬಹಳ ಸಹಜ. ಆದರೆ ಇದು ತುಂಬಾ ದುಷ್ಪರಿಣಾಮಕಾರಿಯಾದುದು.

ಮಗುವಿಗೆ ಕೊಟ್ಟ ಮಾತನ್ನು ಹಿರಿಯರು ನಡಸಿಕೊಡ ಬೇಕು. ವಾಗ್ದಾನ ಮಾಡಿದರೆ ಅದರಂತಯೇ ನಡೆದುಕೊಳ್ಳಬೇಕು. ಇಲ್ಲದಿದ್ದರೆ ನಮ್ಮಲ್ಲಿ ನಂಬಿಕೆಯಿರುವುದಿಲ್ಲ. ಆದುದರಿಂದ ನಡೆಸಿ ಕೊಡಲು ಶಕ್ಯವಾದುದನ್ನೇ ವಾಗ್ದಾನ ಮಾಡುವುದು ಸುರಕ್ಷಿತವಾದ ಮಾರ್ಗ.

# ಅನುಬಂಧ

## (ಮಕ್ಕಳ ಬೆಳವಣಿಗೆಯ ಕೆಲವು ಅಂಶಗಳು)

### 1. ಕೈಹಿಡಿತದ ಮುನ್ನಡೆ.

| ವಯಸ್ಸು | ವಿವರ |
|---|---|
| **ಹುಟ್ಟಿದ ಸಮಯ** .... | ಮರದ ತುಂಡು ತಾಕಿದರೆ ಅದನ್ನು ಹಿಡಿದು ಕೊಳ್ಳುವುದು. |
| 6 ತಿಂಗಳು .... | ಮರದ ತುಂಡನ್ನು ನೋಡಿದ ತಕ್ಷಣ ಹಿಡಿದು ಕೊಳ್ಳುವುದು. |
| 12 ತಿಂಗಳು .... | ಒಂದು ಮರದ ತುಂಡನ್ನು ಮತ್ತೊಂದರ ಮೇಲೆ ಇಡುವುದು. |
| 18 ತಿಂಗಳು .... | ಒಂದರ ಮೇಲೊಂದು ಮೂರು ತುಂಡುಗಳನ್ನು ಇಟ್ಟು ಗೋಪುರ ಕಟ್ಟುವುದು. |
| 24 ತಿಂಗಳು .... | ಒಂದರ ಪಕ್ಕಲ್ಲೊಂದು ಮೂರು ತುಂಡುಗಗಳನ್ನಿಟ್ಟು ರೈಲು ಮಾಡುವುದು. |
| 36 ತಿಂಗಳು .... | ಎರಡು ತುಂಡುಗಳ ಮೇಲೆ ಮೂರನೆಯ ಮರದ ತುಂಡನ್ನಿಟ್ಟು ಸೇತುವೆ ಕಟ್ಟುವುದು. |

### 2. ಆಕೃತಿ ರಚನೆಯ ಬೆಳವಣಿಗೆ.

| | |
|---|---|
| 18 ತಿಂಗಳು .... | ಗೀರನ್ನು ಮೇಲಿಂದ ಕೆಳಗೆ ಎಳೆಯುವುದು |
| 24 ತಿಂಗಳು .... | ಗೀರನ್ನು ಅಡ್ಡಡ್ಡಲಾಗಿ ಎಳೆಯುವುದು. |
| 36 ತಿಂಗಳು .... | ಸಿಕ್ಕಾಬಟ್ಟೆ ಗೀಚುವುದು. |
| 48 ತಿಂಗಳು .... | ಗೋಳಾಕಾರ ಮತ್ತು ಶಿಲುಬೆ (+)ಯನ್ನು ರಚಿಸುವುದು. |
| 60 ತಿಂಗಳು .... | + , ತ್ರಿಕೋನ ಚೌಕಟ್ಟುಗಳನ್ನು ರಚಿಸುವುದು. |
| 66—72 ತಿಂಗಳು .... | ವಜ್ರಾಕೃತಿಯನ್ನು ರಚಿಸುವುದು. |

## 3 ಭಾಷೆಯ ಬೆಳವಣಿಗೆ.

| ವಯಸ್ಸು | | ಗೊತ್ತಿರುವ ಪದಗಳು |
|---|---|---|
| ವ. | ತಿಂ. | ಸಂಖ್ಯೆ |
| 0 | 8 | 0 |
| 0 | 10 | 1 |
| 1 | 0 | 3 |
| 1 | 3 | 19 |
| 1 | 6 | 22 |
| 1 | 9 | 118 |
| 2 | 0 | 272 |
| 2 | 6 | 446 |
| 3 | 0 | 1000 |

## 4. ದೈಹಿಕ ಕೆಲಸಗಳ ಮೇಲಿನ ಹತೋಟಿಯ ಮುನ್ನಡೆ.

| ವಯಸ್ಸು | | ಕೆಲಸದ ವಿವರ |
|---|---|---|
| 1 ವರ್ಷ | .... | ಮಲವಿಸರ್ಜನೆಯ ಹತೋಟಿ |
| 2 ವರ್ಷ | .... | ಮೂತ್ರವಿಸರ್ಜನೆಯಹತೋಟಿ, ಸ್ನಾನಮಾಡಿಸಿ ಕೊಳ್ಳುವಾಗ ಮತ್ತು ಉಡುಪು ಹಾಕಿ ಕೊಳ್ಳುವಾಗ ತಾಯಿಗೆ ಸಹಕರಿಸುವುದು. |
| 3 ವರ್ಷ | .... | ಆಟದಸಾಮಾನುಗಗಳನ್ನು ಜಾಗರೂಕತೆಯಿಂದ ನೋಡಿಕೊಳ್ಳಲು ಆರಂಭಿಸುವುದು. ಸಹಾಯ್ಯ ವಿಲ್ಲದೆ ಊಟಮಾಡುವುದು, ತನ್ನ ಉಡುಪನ್ನು ತಾನೇ ಹಾಕಿ ತೆಗೆಯುವುದು. ಸಣ್ಣಪುಟ್ಟ ಮನೆ ಕೆಲಸಗಳಲ್ಲಿ ತಾಯಿಗೆ ಸಹಕಾರವನ್ನು ಮಾಡುವುದು. |
| 4 ವರ್ಷ | .... | ತನ್ನ ಊಟವನ್ನು ತಾನೇ ಬಡಿಸಿಕೊಳ ಬಲ್ಲುದು. ಊಟಮಾಡುತ್ತಾ ಮಾತನಾಡವುದು. |

## 5. ದಿನದ ಒಟ್ಟು ನಿದ್ರೆಯ ಕಾಲ.

| ವಯಸ್ಸು | ಕಾಲ |
| --- | --- |
| ಮೊದಲ ತಿಂಗಳು | 19 ಗಂಟೆಗಳು |
| 3 ನೇ ತಿಂಗಳು | 15 ಗಂಟೆಗಳು |
| 12 ನೇ ತಿಂಗಳು | 12 ಗಂಟೆಗಳು |

## 6. ನಿರಾತಂಕ ನಿದ್ರೆಯ ಅವಧಿ.

| | |
| --- | --- |
| ಮೊದಲ ತಿಂಗಳು | 3½—4 ಗಂಟೆಗಳು |
| 3 ತಿಂಗಳು | 6 ಗಂಟೆಗಳು |
| 12 ತಿಂಗಳು | 9—10 ಗಂಟೆಗಳು |

## 7. ದೈಹಿಕ ಹತೋಟಿ ಮತ್ತು ಚಲನ ಶಕ್ತಿಯ ಬೆಳವಣಿಗೆ

| ವಯಸ್ಸು | | ವಿವರ |
| --- | --- | --- |
| 3 ವಾರಗಳು | .... | ಬೋರಲು ಮಲಗಿಸಿದರೆ ತಲೆಯನ್ನು ಎತ್ತುವುದು. |
| 9 ವಾರಗಳು | .... | ಬೋರಲು ಮಲಗಿಸಿದರೆ ಎದೆಯನ್ನು ಎತ್ತುವುದು |
| 18 ವಾರಗಳು | .... | ತೊಡೆಯ ಮೇಲೆ, ಸಹಾಯದಿಂದ ಕೂಡುವುದು |
| 6 ತಿಂಗಳು | .... | ಕ್ಷಣಮಾತ್ರ ತಾನೇ ಕುಳಿತುಕೊಳ್ಳುವುದು. |
| 7 ತಿಂಗಳು | .... | ಉರುಳುವುದು. |
| 7-5 ತಿಂಗಳು | .... | ಸ್ವಲ್ಪಕಾಲ ಕೂಡುವುದು. |
| 8 ತಿಂಗಳು | .... | ತಾಯಿ ನಿಲ್ಲಿಸಿದರೆ ನಿಲ್ಲುವುದು. |
| 10 ತಿಂಗಳು | .... | ಹಿಂದಕ್ಕೆ ಜಾರುವುದು. |
| 10-5 ತಿಂಗಳು | .... | ಕುರ್ಚಿ ಬೆಂಚುಗಳನ್ನು ಹಿಡಿದು ನಿಲ್ಲುವುದು. |
| 11 ತಿಂಗಳು | .... | ಅಂಬೆಗಾಲು ಇಡುವುದು. |
| 12 ತಿಂಗಳು | ... | ಕೈಹಿಡಿದು ನಡೆಯುವುದು. |
| 1 ವರ್ಷ 1 ತಿಂಗಳು | .... | ಹಂತಹತ್ತುವುದು. |
| 1 ವರ್ಷ 2 ತಿಂಗಳು | .... | ಸ್ವತಂತ್ರವಾಗಿ ನಿಂತುಕೊಳ್ಳುವುದು. |
| 1 ವರ್ಷ 3 ತಿಂಗಳು | .... | ಸ್ವತಂತ್ರವಾಗಿ ನಡೆಯುವುದು |

## ಪುಸ್ತಕ ಭಂಡಾರಮಾಲೆಯ ಇತರ ಪುಸ್ತಕಗಳು

---

ಹಿಂದೂ ಧರ್ಮ

ಗಾಂಧೀಜಿ

ನಳಚರಿತ್ರೆಯ ಸಂಗ್ರಹ

ವ್ಯವಹಾರ ಧರ್ಮ

ಕಾಮಧೇನು

ಪ್ರಕಾಶಕರು

ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ
ಕೃಷ್ಣಮೂರ್ತಿಪುರಂ
ಮೈಸೂರು